ಡಾ॥ ಡಿ. ಎಸ್. ಕರ್ಕಿಯವರು (1907–1984) ಕಾಡಸಿದ್ಧೇಶ್ವರ ಕಾಲೇಜಿನ ಪ್ರಾಂಶುಪಾಲರಾಗಿ ನಿವೃತ್ತರಾದರು. ಕರ್ನಾಟಕ ವಿಶ್ವವಿದ್ಯಾಲಯ ದಲ್ಲಿ ಪ್ರಾಧ್ಯಾಪಕರಾಗಿದ್ದರು. 1949ರಲ್ಲಿ ಪ್ರಕಟವಾದ 'ನಕ್ಷತ್ರ ಗಾನ' ಇವರ ಮೊದಲನೆಯ ಕೃತಿ. ಇವರ 'ಗೀತಗೌರವ' ಸಂಗ್ರಹಕ್ಕೆ ಕರ್ನಾಟಕ ರಾಜ್ಯ ಸಾಹಿತ್ಯ ಅಕಾಡೆಮಿ ಬಹುಮಾನ ದೊರೆಯಿತು. 'ಭಾವತೀರ್ಥ', 'ನಮನ'. 'ಕರಿಕೆ–ಕಣಗಲು'. 'ನಾಲ್ದೆಸೆಯ ನೋಟ' ಮೊದಲಾದ ಕೃತಿ ಗಳನ್ನು ಬರೆದಿದ್ದಾರೆ. 'ಕನ್ನಡ ಛಂದೋವಿಕಾಸ' (1956) ಇವರ ಸಂಶೋಧನಾ ಮಹಾಪ್ರಬಂಧ. 'ಕಾವ್ಯ ಗೌರವ' ಡಾ॥ ಕರ್ಕಿಯವರಿಗೆ ಅಭಿಮಾನಿಗಳು ಒಪ್ಪಿಸಿದ ಗೌರವ ಗ್ರಂಥ.

ಜನಪ್ರಿಯ ಪುಸ್ತಕ ಮಾಲೆ

# ನಕ್ಷತ್ರ ಗಾನ

ಡಾ|| ಡಿ. ಎಸ್. ಕರ್ಕಿ



ಕರ್ನಾಟಕ ಸರ್ಕಾರ
**ಕನ್ನಡ ಪುಸ್ತಕ ಪ್ರಾಧಿಕಾರ**
ಪಂಪಮಹಾಕವಿ ರಸ್ತೆ. ಚಾಮರಾಜಪೇಟೆ
ಬೆಂಗಳೂರು–೫೬೦ ೦೧೮

NAKSHATRA GANA a collection of poems
by Dr. D. S. Karki, published by Kannada Pustaka
Pradhikara (Kannada Book Authority), Pampa Mahakavi
Road, Chamarajpet, Bangalore-560 018 1995

Pages : 8+92





ಬೆಲೆ : ರೂ. 11-00

ಮುದ್ರಣ : **ಲಿಪಿ ಮುದ್ರಣ**
ಬಸವನಗುಡಿ,
ಬೆಂಗಳೂರು-೫೬೦ ೦೦೪

# ಮುನ್ನುಡಿ

ಮೊದಲನೆಯ ವಿಶ್ವ ಕನ್ನಡ ಸಮ್ಮೇಳನದ ಸಂದರ್ಭದಲ್ಲಿ ಕರ್ನಾಟಕ ಸರ್ಕಾರವು ಒಂದು ಅತ್ಯಂತ ಉಪಯುಕ್ತವಾದ ಹೆಜ್ಜೆಯನ್ನಿಟ್ಟಿತು. ಒಂದು ನೂರಕ್ಕೂ ಹೆಚ್ಚು ಪುಸ್ತಕಗಳನ್ನು ಸುಲಭ ಬೆಲೆಗೆ ದೊರೆಯುವಂತೆ ಪ್ರಕಟಿಸಿತು.

ಈ ಘನವಾದ ಕಾರ್ಯವನ್ನು ಕರ್ನಾಟಕ ಸರ್ಕಾರವು 'ಜನಪ್ರಿಯ ಪುಸ್ತಕ ಮಾಲೆ'ಯ ಮೂಲಕ ಮುಂದುವರೆಸಿತು. "ಕನ್ನಡ ಓದುಗರಲ್ಲಿ ಉತ್ತಮ ವಾಚನಾಭಿರುಚಿಯನ್ನು ಮೂಡಿಸುವ ಹಾಗೂ ಕನ್ನಡ ಪುಸ್ತಕ ಗಳನ್ನು ಎಲ್ಲರಿಗೂ ಸುಲಭ ಬೆಲೆಯಲ್ಲಿ ಲಭ್ಯವಾಗುವಂತೆ ಮಾಡುವ ದೃಷ್ಟಿ ಯಿಂದ" ೧೯೮೯-೯೦ರ ಸಾಲಿನಿಂದ 'ಜನಪ್ರಿಯ ಪುಸ್ತಕ ಮಾಲೆ'ಯ ಯೋಜನೆಯನ್ನು ಕಾರ್ಯಗತ ಮಾಡಿತು. ೧೯೯೩-೯೪ರ ವರ್ಷದ ಹೊತ್ತಿಗೆ ಈ ಮಾಲೆಯಲ್ಲಿ ೭೮ ಪುಸ್ತಕಗಳು ಪ್ರಕಟವಾದವು.

ಕನ್ನಡ ಪುಸ್ತಕ ಪ್ರಾಧಿಕಾರವು 'ಜನಪ್ರಿಯ ಪುಸ್ತಕ ಮಾಲೆ'ಯ ಮೂಲ ಉದ್ದೇಶವನ್ನು ಕಣ್ಣ ಮುಂದಿರಿಸಿಕೊಂಡು ಮುಂದುವರೆಯುತ್ತಿದೆ. ಜನಪ್ರಿಯತೆಯನ್ನು ಗಳಿಸಿದ ಮೌಲಿಕವಾದ ಕೃತಿಗಳು ಹಲವು ಇಂದು ಓದ ಬಯಸುವವರಿಗೆ ಲಭ್ಯವಿಲ್ಲ. ಇಂತಹ ಕೃತಿಗಳನ್ನು ಆರಿಸಿ, ಒಂದು ಆವೃತ್ತಿಯ ಪ್ರಕಟಣೆಯ ಹಕ್ಕನ್ನು ಪಡೆಯಲು ಸಾಧ್ಯವಾದ ಸಂದರ್ಭದಲ್ಲಿ ಅವನ್ನು ಆದಷ್ಟು ಸುಲಭ ಬೆಲೆಗೆ ಓದುಗರಿಗೆ ಲಭ್ಯಮಾಡಿಕೊಡಲು ಕನ್ನಡ ಪುಸ್ತಕ ಪ್ರಾಧಿಕಾರವು ಉದ್ದೇಶಿಸಿದೆ.

ಈ ಮಾಲೆಯಲ್ಲಿ ಪುಸ್ತಕಗಳು ಅರಳಲು ನೆರವಾದವರು ನಾವು ಆರಿಸಿದ ಪುಸ್ತಕಗಳ ಕೃತಿಸ್ವಾಮ್ಯವನ್ನು ಪಡೆದಿದ್ದು ಅದನ್ನು ಈ ಮಾಲೆಯಲ್ಲಿ ಸೇರಿಸಲು ಅನುಮತಿ ನೀಡಿದ ಮಿತ್ರರು. ಈ ಪುಸ್ತಕವನ್ನು ಕನ್ನಡ ಪುಸ್ತಕ ಪ್ರಾಧಿಕಾರವು ಪ್ರಕಟಿಸಲು ಒಪ್ಪಿಗೆಯನ್ನು ನೀಡಿದ ಪ್ರೊ. ಡಿ. ಎಸ್. ಕರ್ಕಿ ಅವರಿಗೆ ನಾವು ಕೃತಜ್ಞರು. ಪುಸ್ತಕವನ್ನು ಅಂದವಾಗಿ ಸಕಾಲಕ್ಕೆ ಮುದ್ರಿಸಿ

ಕೊಟ್ಟ ಲಿಪಿ ಮುದ್ರಣಾಲಯ ಅವರಿಗೂ ನಮ್ಮ ವಂದನೆಗಳು. ಈ ಮಾಲೆಯ ನಿರ್ವಹಣೆಯಲ್ಲಿ ನೆರವಾದ ಕನ್ನಡ ಪುಸ್ತಕ ಪ್ರಾಧಿಕಾರದ ಸದಸ್ಯರಿಗೂ ಜನಪ್ರಿಯ ಪುಸ್ತಕ ಮಾಲೆಯ ಉಪಸಮಿತಿಯ ಸದಸ್ಯರಿಗೂ ನಾನು ಕೃತಜ್ಞ.

ಸಹೃದಯ ಕನ್ನಡಿಗರು ಈ ಪುಸ್ತಕವನ್ನು ಸ್ವಾಗತಿಸುವರೆಂಬ ವಿಶ್ವಾಸ ನಮಗಿದೆ.

**ಎಲ್. ಎಸ್. ಶೇಷಗಿರಿ ರಾವ್**
ಅಧ್ಯಕ್ಷರು
ಕನ್ನಡ ಪುಸ್ತಕ ಪ್ರಾಧಿಕಾರ

ಬೆಂಗಳೂರು
೨೦-೦೧-೯೫

# ಮೊದಲ ಮಾತು

ರಬಕವಿಯ ಸ್ನೇಹಿತರ ಸ್ನೇಹದ ಗುರುತಾಗಿ **"ನಕ್ಷತ್ರ ಗಾನ"** ಕನಸಿನ ಆಕಾಶದಿಂದ ನೆನಸಿನ ಲೋಕಕ್ಕೆ ಇಳಿದು ಬಂದಿದೆ. ೧೯೩೪ ರಿಂದ ೧೯೪೮ರ ವರೆಗಿನ ಕಾಲಾವಧಿಯಲ್ಲಿ ಆಗಾಗ ರೂಪುಗೊಂಡ ಕವನಗಳಲ್ಲಿ ಸುಮಾರು ಅರ್ಧದಷ್ಟು ಈ ಸಂಗ್ರಹದಲ್ಲಿ ಸೇರಿವೆ. ಸಾಧ್ಯವಿದ್ದ ಮಟ್ಟಿಗೆ ಅವುಗಳನ್ನು ಅವು ಅರಳಿದ ಕ್ರಮದಲ್ಲಿ ಹೆಣೆಯಲಾಗಿದೆ. ಕವನ ಸೃಷ್ಟಿಯತ್ತ ನನ್ನ ದೃಷ್ಟಿ ಹರಿದುದು ಸೃಷ್ಟಿ ಸೌಂದರ್ಯವನ್ನು ಎತ್ತಿ ತೋರಿ ಸಂತೋಷಸಾಗರದಲ್ಲಿ ಮನವನ್ನು ಮೀಯಿಸಿದ ಕಾರವಾರದಲ್ಲಿ; ೧೯೩೫ರಲ್ಲಿ ಈ ಸಂಗತಿ ಸಂಭವಿಸಿತು.

ಯಾವ ಪ್ರಭಾವಗಳು ಮನದ ಮೇಲೆ ಆಡಿದುದರ ಪರಿಣಾಮವಾಗಿ ಈ ಹಾಡುಗಳು ಮೂಡಿ ಬಂದಿವೆ ಎಂಬುದನ್ನು ಬಿಡಿಸಿ ಹೇಳುವುದು ಸುಲಭ ವಲ್ಲ. ಅಂತರಿಕ್ಷವನ್ನು ವ್ಯಾಪಿಸಿದ ಅಸಂಖ್ಯಾತ ನಕ್ಷತ್ರಗಳ ಕಿರಣಗಳೊಡನೆ ಎಲ್ಲೆಲ್ಲಿಯೂ ಯಾವಾಗಲೂ ಗಾನವು ಇಳಿದು ಬರುತ್ತಲೇ ಇರುತ್ತದೆ. ಆ ಕಿರಣಗಳಲ್ಲಿ ಯಾವುವೊ ಈ ಕವನಗಳ ಹಿಂದೆ ಇರುವ ನಾಡಿಗಳ ಮೇಲೆ ಒಂದಿನಿತು ಆಡಿ ಅವುಗಳನ್ನು ಈ ರೀತಿಯಾಗಿ ನುಡಿಸಿರಬಹುದು. ಹರಿಹರ ಕವಿಯ ರಗಳೆಗಳ. ಶರಣರ ವಚನಗಳ, ಕವೀಂದ್ರ ರವೀಂದ್ರರ ಭಾವಗೀತ ಗಳ, ಅದರಂತೆ ನಮ್ಮ ಇಂದಿನ ಹಿರಿಯ ಕವಿಗಳಾದ ಮಾಸ್ತಿ, ಮಧುರಚೆನ್ನ, ಬೇಂದ್ರೆ, ಪುಟ್ಟಪ್ಪ, ವಿ.ಸೀ. ಅವರ ಗೀತಗಳ ಪರಿಚಯವು ಮೊದಲು ಮಸಮಸಕಾಗಿ ಮೂಡಿದ ಒಲವನ್ನು ನಿಚ್ಚಳಗೊಳಿಸಿ ಭಾವಾಭಿವ್ಯಕ್ತಿಗೆ ಒಂದು ದೀಕ್ಷೆಯನ್ನು ಕೊಟ್ಟಿರಬಹುದೆಂದು ನಾನು ಭಾವಿಸಿದ್ದೇನೆ.

ಈ ಕವನಗಳಲ್ಲಿ ನೋವಿನ ಸುಳುಹೇ ಕಾಣುವುದಿಲ್ಲವೆಂದು ನನ್ನ ಸ್ನೇಹಿ ತರಲ್ಲಿ ಕೆಲವರು ಸ್ನೇಹದ ಸಲಿಗೆಯಿಂದ ಒಂದು ಕೊರತೆಯನ್ನು ನನ್ನ ಗಮ ನಕ್ಕೆ ತಂದಿದ್ದಾರೆ. ಅದು ಸತ್ಯವಾದ ಸಂಗತಿ. ನನಗೆ ತೋರಿದಂತೆ ಅದರ ಸ್ಪಷ್ಟೀಕರಣ ಹೀಗೆ; ಮೊದಲನೆಯದಾಗಿ ನನ್ನ ಜೀವನಕ್ಕೆ ನೋವಿನ ಸೋಂಕೇ ಕಡಮೆಯಾಗಿರಬಹುದು, ಎರಡನೆಯದಾಗಿ, ನೋವು ಒಮ್ಮೊಮ್ಮೆ

ನುಗ್ಗಿ ಬಂದಿರಬಹುದಾದರೂ ಅದನ್ನು ಆಳವಾಗಿ ಅನುಭವಿಸಿ ಅನುಭಾವಕ್ಕೆ ತಿರುಗಿಸುವ ಶಕ್ತಿ ಸಾಲದೆ ಹೋಗಿರಬಹುದು.

“ಪ್ರೇಮದಂಥ ವಸ್ತು ಜಗದೊಳಗೆ ಇಲ್ಲ ಮನಗಂಡ ಮಾತು” ಎಂದು ಮಧುರ ಚೆನ್ನರು ಹಾಡಿದ್ದಾರೆ. ಈ ಮಾತು ನನ್ನ ಅನುಭವಕ್ಕೂ ಬಂದಿದೆ. ಈ ಕವನಗಳಲ್ಲಿ ಏನಾದರೂ ಸ್ವಾರಸ್ಯವಿದ್ದರೆ ಅದು ಅಂಗಡಿ, ಇಂಚಲ, ತುರಮರಿ ಮೊದಲಾದ ರಸಿಕ ಮಿತ್ರರ ಸ್ನೇಹಕ್ಕೆ ಸಲ್ಲಬೇಕಾದುದು. ಇವು ಗಳಲ್ಲಿ ಕೆಲವು ಜಯಕರ್ನಾಟಕ, ಉಷಾ, ಪ್ರಗತಿ ಮೊದಲಾದ ಮಾಸಪತ್ರಿಕೆ ಗಳಲ್ಲಿ ಪ್ರಕಟವಾಗಿವೆ. ಆ ಪತ್ರಿಕೆಗಳ ಸಂಪಾದಕರಿಗೆ ಕೃತಜ್ಞತೆಗಳನ್ನು ಸಲ್ಲಿಸು ವುದು ನನ್ನ ಕರ್ತವ್ಯ.

ಈ ಕವನಸಂಗ್ರಹವು ಜೀಕಿ ಬರಲು ಕವಿ **ಈಶ್ವರ ಸಣಕಲ್ಲ** ಅವರ ತವರೂರಾದ **ರಬಕವಿ** ಉಯ್ಯಾಲೆಯಾಗಿ ಪರಿಣಮಿಸಿದೆ. ಶ್ರೀ. ಚ. ಚ. ಆಬಕಾರ ಮೊದಲಾದ ಮಿತ್ರರು ಜೋಕಾಲಿಯನ್ನು ಒಲುಮೆಯಿಂದ ಕಟ್ಟಿ ನಲುಮೆಯಿಂದ ತೂಗಿದ್ದಾರೆ. ಅಂದವಾದ ರೀತಿಯಲ್ಲಿ ಕಣ್ಣೆದುರು ಬಂದ ನಕ್ಷತ್ರಗಾನವು ಅವರ ಪ್ರೇಮದ ಪ್ರತೀಕ. ತಮ್ಮ ಕಲ್ಪನೆಯ ಬೆಳಕಿನಲ್ಲಿ ಈ ಸಂಗ್ರಹಕ್ಕೆ ಒಪ್ಪುವ ಚಿತ್ರಗಳನ್ನು ಬರೆದುಕೊಟ್ಟ ಶ್ರೀ ಅಲ್ಲಪ್ಪ ಹುದ್ದಾರ ಅವರಿಗೂ, ಶ್ರೀ ಅಕಬರ ಅಲಿ ಅವರಿಗೂ ನಾನು ಋಣಿ. ಸುಂದರವಾಗಿ ಮುದ್ರಣಗೈದ ಮಿತ್ರ ಸಮೂಹ ಮುದ್ರಣಾಲಯದ ಒಡೆಯರ ಉಪಕಾರ ವನ್ನು ಸ್ಮರಿಸುತ್ತೇನೆ.

ಲಿಂಗರಾಜ ಕಾಲೇಜ,
ಬೆಳಗಾಂವಿ
೧೩–೫–೪೯

**ಡಿ. ಎಸ್. ಕರ್ಕಿ**

# ಪರಿವಿಡಿ

# ನಕ್ಷತ್ರ ಗಾನ

ಹಗಲೆನ್ನದೆ ಇರುಳೆನ್ನದೆ ಗಗನಾಂಗಣದಲ್ಲಿ
ಯಾವುದೋ ಭಾವದ ತಾಳಕೆ ಚರಣಂಗಳ ಚೆಲ್ಲಿ
ದೂರದಿ ತೂರುವ ಕಿರಣ-ಶ್ರೇಣಿಯ ತಾನದಲಿ
ಹೊರಗಿವಿಗೈದದ ಗಾನವಗೈವೆವು ಮೇಳದಲಿ.

ಮುಗಿಯದ ಮುಗಿಲಿನ ಕಡಲಲಿ ನಲಿನಲಿದೀಸುವೆವು
ಯುಗಯುಗದಲಿ ಅಚ್ಚಳಿಯದ ನಗೆಯನು ಸೂಸುವೆವು
ಬಯಲಿಗೆ ಬಗೆ ಬಗೆ ರಾಗದ ಬಲೆಯನು ಬೀಸುವೆವು
ಮಂಗಳ ಗೀತಂಗಳೊಳಾತ್ಮಂಗಳ ಮೀಸುವೆವು.

ಋತುಋತುಗಳು ತಳೆಯುವ ರತಿ ಇಳಿಯುವುದೆಮ್ಮಿಂದ
ಮನಮನದಲಿ ಮೂಡುವ ಮತಿ ಸುಳಿಯುವುದೆಮ್ಮಿಂದ
ಅನುರಾಗಕೆ ಅನುರಾಗವ ಮೇಳಿಪುದೆಮ್ಮಿಂದ
ಇಂತೊಗೆಯುತಲಿದೆ ಸಂತತ ಆಂತರ್ಯದ ಛಂದ.

---

ನಾಗಪಂಚಮಿ ಆಗಸ್ಟ್ ೧೯೪೮

# ಸ್ವಾತಂತ್ರ್ಯಕ್ಕೆ ಸ್ವಾಗತ

ಬಾ, ಉಸಿರೆ, ಬಾ
ಹೊಸತು ಬಂದ, ನಾಡಿನುಸಿರೆ
ಹೊಸತಿಲಲ್ಲಿ ಬಾ

ಎದೆಯ ಎದೆಯ ಕರೆಯ ನಂಬಿ
ನಾಡ ನಾಡಿಗಳಲಿ ಹೊಮ್ಮಿ
ಜೀವ ತುಂಬಿ ಭಾವ ತುಂಬಿ
ಬಾಳ ತುಂಬಿ ಬಾ.

ಹೊಸತಿಲಲ್ಲಿ ರಂಗವಲ್ಲಿ
ತಳಿರು ತೋಂಗಲಲ್ಲಿ ಇಲ್ಲಿ
ಕಣ್ಗೆ ಕಣ್ಗೆ ಚೆಲುವ ಚೆಲ್ಲಿ
ಕರೆಯುತಿಹವು ಬಾ.

ಜಗದ ಮನದ ಬನದೊಳಾಡಿ
ಅರಳಿದಲರ ಕಂಪ ಹರಡಿ
ಕರುಳ ತೀಡಿ ಹಾಡ ತೋಡಿ
ಹಿಗ್ಗ ನೀಡಿ ಬಾ

ವಿಧ ವಿಧ ವಿಜ್ಞಾನದಲ್ಲಿ
ಸಕಲ ಲಲಿತ ಕಲೆಗಳಲ್ಲಿ
ವಿವಿಧ ಅಂಗ ರಂಗದಲ್ಲಿ
ಸುಳಿದು ಹೊಳೆದು ಬಾ.

ನಾವು ಕಂಡ ಕನಸಿನಲ್ಲಿ
ಜೀವ ಬರೆದು ಬಣ್ಣದಲ್ಲಿ
ದಿಟವ ತೆರೆದು ದೃಷ್ಟಿಯಲ್ಲಿ
ನಾಡಿನುಸಿರೆ ಬಾ.

ಅಲೆ ಅಲೆ ಅಲೆ ಬಂದು ಕೂಡು
ಚಕ್ರಧ್ವಜಕೆ ಉಸಿರನೂಡು
ನೀಲದಲ್ಲಿ ಲೀಲೆ ಮಾಡು
ನೀನೆ ಸ್ಫೂರ್ತಿ ಬಾ.

# ಪ್ರಭಾತ ಗೀತ

ಏಳಯ್ಯಾ ಏಳು ಬಾಳಾ
ಕೇಳದೆಯೆ–ಜಗದ ಗಂಟೆಗಳ ಮೇಳ !

೧

ಜಗವು ಕಣ್ದೆರೆಯುತಲಿದೆ–ತೆರೆದಂತೆ
ಜಗದ ಚೆಲುವರಳುತಲಿದೆ–ಒಡನೆ
ಜಗದಾತ್ಮನಸಮ ಲೀಲೆ–ಸುತ್ತಲುಂ
ಮೊಗವೆತ್ತಿ ನಗುತಲಿಹುದು–ಮಗುವೇ.

೨

ಹಸುಳೆ ನೀನೆದ್ದು ನೋಡು–ಮೂಡಲಲಿ
ನಸುನಗೆಯ ಬಿಂಕದಿಂದ–ಚೆಲುವೆ
ಉಷೆ ಮೂಡಿ ಬರುತಲಿಹಳು–ನಿನಗೊಲ್ದು
ಹೊಸ ಸ್ವಾಗತವನೀಯಲು–ಏಳು.

೩

ತಂಬೆಲರು ತೀಡುತಲಿದೆ–ನಿನ್ನ ಸುಯ್
ಗಂಪನರಸುತ ಪೂಗಳ–ಕಂಪು
ತುಂಬದದರೆದೆಯ ನೀನೇ–ಉಸಿರೆತ್ತಿ
ಹಂಬಲವ ಹರಿಸು ಕರುಣಾ–ಭರಣಾ.

೪

ಹಕ್ಕಿಗಳು ಹರುಷದಿಂದ_ಮೈಮರೆದು
ನಕ್ಕು ನಲಿಯುತ್ತಲಿರುವ-ಜಗದ
ಉಕ್ಕಂದದೈಸಿರಿಯನು-ಹಾಡುತಿವೆ
ಅಕ್ಕರತೆಯಿಂದ ಕರೆದು-ನಿನ್ನ

೫

ಮೆಲ್ಲಮೆಲ್ಲನೆ ಕಂಗಳ-ರೆಪ್ಪೆಗಳ
ಸಲ್ಲಲಿತವಾಗಿ ಎತ್ತಿ-ತೆರೆದು
ಚೆಲ್ಲನೋಟವನು ಬೀರಿ-ನಾಲ್ದೆಸೆಗೆ
ಚೆಲ್ವಿಕೆಯ ಹೊನಲ ಹರಿಸಾ-ಅರಸಾ

೬

ರಂಗವಣಿಯಾಗುತಲಿದೆ-ದೆಸೆ ದೆಸೆಗೆ
ರಂಗು ರಂಗಿನ ತೆರೆಗಳ_ನಡುವೆ
ಗಂಗಾಧರನೆ ಕಂಗಳ-ತೆರೆದಿದ್ದು
ಸಿಂಗರದ ಶಿಖರ ತೋರಾ-ಧೀರಾ

೭

ಕನಸು-ನಾಡಿನ ಮೋಡಿಯು-ಸಾಕೀಗ
ಕನಸು_ನಾಡಿನೊಳುದಯಿಸಿ-ಚಲಿಸಿ
ನನಗೆಂದೆ ಹಾರೈಸಿದ_ಜಗದ ಜೀ-
ವನವ ನವಗೊಳಿಸು ಲೀಲಾ-ಲೋಲಾ

# ಕಾರವಾರ

ಕಾರವಾರದಲೊಂದು ಚೆಂದದ ಮನೆಯನು
ಮಾಡಿಹೆವು-ನಾವು-ಮಾಡಿಹೆವು
ಸಿಂಗಾರರಸದಿಂದ ತುಂಬಿದ ಬಾಳನು
ಬಾಳಿಹೆವು-ನಾವು-ಬಾಳಿಹೆವು.

ಕಾರವಾರವನಾಳ್ವ ಸೃಷ್ಟಿದೇವಿಯು ಚೆಲ್ವ
ಬನಬನದಲಿ ಜೋಲ್ವ ಜೋಕಾಲಿಯಲಿ ನಮ್ಮ
ಬಾಲರಾಜನನೋಡಿ, ನಲಿದು ಜೋಗುಳಹಾಡಿ
ತೂಗಿಹೆವು–ನಾವು ತೂಗಿಹೆವು
ಆನಂದವನೆ ಉಂಡು ತೇಗಿಹೆವು.

ಆಚೆ ಹಸಿರು ಗಿರಿ ಈಚೆ ಸಾಗರ ನೀಲಿ
ಹಬ್ಬಿರೆ ಹೊಗರೇರಿ ಮಧ್ಯದ ಮಳಲಲಿ
ಗುಬ್ಬಿಗೂಡನು ಮಾಡಿ ತೀಡುವ ಎಲರಲಿ
ರಾಜನ **'ಗಾಗೂ'** ಕೇಳಿಹವು
ಬಗೆ ತೆರೆದ ಮುಗಿಲಲ್ಲಿ ತೇಲಿಹೆವು.

# ನಕ್ಷತ್ರಗಾನ

ಮುರಿದು ಮೊರೆವ ತೆರೆ, ತೆರೆಯ ಕೊನೆಯ ನೊರೆ-
ಯಿಂದ ರಂಜಿಪ ಮೋರೆಯುರಿಯುದ ಕಡಲೇರೆ
ಬೆಳ್ದಿಂಗಳಿರುಳಲ್ಲಿ ಬೆಳಕಿನ ಹೊಸಲಲ್ಲಿ
ಎದೆಯ ದೋಣಿಯ ತೇಲಬಿಟ್ಟಿಹೆವು;
ಗಗನ ಗೋಪುರಗಳ ಕಟ್ಟಿಹೆವು.

ಸಂಜೆಯ ಸಮಯದಿ ಪಡುವಲ ಮುಗಿಲಲಿ
ಬಣ್ಣ ಬಣ್ಣದ ಬಲೆ ಕಣ್ಣಗೆಸೆದು ನಿಲೆ
ರಾಜರ ರಾಜನ ಅನುಪಮ ತೇಜನ
ಬಾಳಿಗೆ ಬಣ್ಣವ ಕೊಟ್ಟಿಹೆವು;
ಚಿನ್ನದ ಮೆರುಗನು ಇಟ್ಟಿಹೆವು.

ಮರದ ನೆಳಲ ತಂಪು, ತೀಡುವೆಲರ ತಂಪು
ಹೆರಳ ಹೂಗಳ ಕಂಪು ಸೇರಿ ಸಂದಿರೆ ಸೊಂಪು
ಶಾಂತಿಯ ಸೆರೆಯಲಿ ಸಮರಸದೊಡಲಲಿ
ಮಗುವಿನ ಬಗೆಯನು ನೆಯ್ದಿಹೆವು;
ಮನದ ಮಂದಾರವು ಅರಳುವ ಸಮಯವ
ಕಾಯ್ದಿಹೆವು-ನಾವು-ಕಾಯ್ದಿಹೆವು.

# ಬಾಳ ನಡೆಸು

ತಾಳಲಯದಲಿ ಬಾಳ
ನಡೆಸು ದೇವಾ.

ನಿನ್ನ ಚಿತ್ತದ ಸಂಗ-
ದಿಂದ ಭಾವತರಂಗ
ನೆಗೆದು ಬಾಳ್ ರಸರಂಗವಾಗುವಂತೆ-

ಹಗಲು ಸೂರ್ಯನ ಕಿರಣ
ಇರುಳು ಚಂದ್ರನ ಕಿರಣ–
ಗಳಿಗೆ ಅಂತಃಕರಣ ಸ್ಫುರಿಸುವಂತೆ-

ನಾಳ ನಾಳಗಳಲ್ಲಿ
ನರ್ತನದ ಗತಿಯಲ್ಲಿ
ಜೀವ ಉತ್ಸಾಹದಲಿ ಚಲಿಸುವಂತೆ–

'ಸರಿಗಮ'ದ ನದಿಯಲ್ಲಿ
ಹರಿಗೋಲ ತೆರದಲ್ಲಿ
ನನ್ನ ಜೀವನ ತೇಲಿ ಸಾಗುವಂತೆ.

# ನಟರಾಜನಿಗೆ

ನಟರಾಜ, ನಿನ್ನಾ ಪ್ರಚಂಡಲಯ ತಾಂಡವದಿ
ಘನತಿಮಿರಮಂ ಮಥಿಸಿ ತೈಜಸವ ಹೊರಹಿರಿದು
ಆ ಬೆಳಕಿನಿಂದೆನಿತೊ ಗ್ರಹ ತಾರೆಗಳ ಸಮೆದು
ಆಕಾಶದೊಳ್ ನೇರವಾಗಿ ಕೀಲಿಸಿ ಕ್ರಮದಿ
ನಾಟ್ಯವಿನ್ಯಾಸದಿಂ ಭ್ರಮಣಗತಿಯಂ ನೀಡಿ
ತಿಗುರಿಯೊಲು ತಿರ್ರೆಂದು ತಿರುಗಿಸುತ ನಲಿನಲಿದು
ಸರಸ ಸಮ್ಮೋಹ ಸಮ್ಮೇಳನದಿ ಮೈಮರೆದು
ಸುರಿಸುತಿಹೆಯಂತೆ ಸಮರಸವ, ನೀಂ ಸೊಗಸಾಡಿ !

ಅದರಾ ಸಮರಸವನೆಲ್ಲ ಬರುಗನಸೆನಗೆ
ಎನ್ನಂತರಂಗ ವಿಶ್ವದ ಕಟ್ಟು ಕ್ರಮಗೆಟ್ಟು
ಹೋಗಿಹುದು ಎನ್ನೊಡಲಚಕ್ರಗಳು ಬವಣ ಬಗೆ–
ಗಾಣದೆಯೆ ನಿಂದಿಹವು ತೊಡಕಿನಲಿ ನೆಲೆಗೆಟ್ಟು
ಇಲ್ಲಿ, ಎನ್ನೊಡಲಾಳದಲಿ, ನಾಟ್ಯವಾಡು ಬಾ
ಅಂತರಂಗದ ಗ್ರಹಗಳಂ ಮೇಳಗೊಳಿಸು ಬಾ.

# ತಾಯಿ ಎಲ್ಲಿ ?

ಎದೆಯ ಎದೆಯೊಳಗಿಂದ
ಕೊರಗಿನರೆಮರೆಯಿಂದ
ಕೂಗೊಂದು ಕೇಳುತಿದೆ : "ತಾಯಿ ಎಲ್ಲಿ ?
—ನನ್ನ ತಾಯಿ ಎಲ್ಲಿ ?'

ಕಾಲವಾಹಿನಿಯಲ್ಲಿ
ಹಿಂದೆ ಹರಿಗೋಲ್ ಚೆಲ್ಲಿ
ನೆನಸು ಅರಸುತಲಿಹುದು—"ತಾಯಿ ಎಲ್ಲಿ
—ನನ್ನ ತಾಯಿ ಎಲ್ಲಿ ?"

"ಮುಂಗುರುಳ ನೇವರಿಸಿ
ಕಣ್ಣಿನಲಿ ಕಣ್ಣಿರಿಸಿ
ಮನ ತೆರೆದು ಮರೆಯಾದ ತಾಯಿ ಎಲ್ಲಿ ?
—ನನ್ನ ತಾಯಿ ಎಲ್ಲಿ ?"

"ಮೆಲುಮೆಲನೆ ಮೈದಡವಿ
ಚೆಲುವಿಕೆಗೆ ತಲೆ ಕೊಡಹಿ
ಕರುಳನ್ನು ಹುರಿಗೊಳಿಸಿ ಹೋದಳೆಲ್ಲಿ ?
—ನನ್ನ ತಾಯಿ ಎಲ್ಲಿ ?"

"ಮುಂದಲೆಯ ಸಲೆ ಮೂಸಿ
ಮುತ್ತಿನೊತ್ತನು ಸಲಿಸಿ
ಎದೆಯಲ್ಲಿ ಒಲವಿಟ್ಟ ತಾಯಿ ಎಲ್ಲಿ ?
—ನನ್ನ ತಾಯಿ ಎಲ್ಲಿ ?"

"ಅರೆವಿರಿದ ತುಟಿ ತಟ್ಟಿ
ಜೆಂಗದಪ್ಪುಗಳ ಮುಟ್ಟಿ
ಮೊಗದಲ್ಲಿ ನಗೆಯಿಟ್ಟು ಹೋದಳೆಲ್ಲಿ ?
—ನನ್ನ ತಾಯಿ ಎಲ್ಲಿ ?"

"ಮೊಲೆಯೂಡಿ ಹಾಲ್ನೀಡಿ
ನಲಿದು ಜೋಗುಳ ಪಾಡಿ
ಸ್ವರ್ಣ ಸ್ವಪ್ನವ ರಚಿಸಿ ಹೋದಳೆಲ್ಲಿ ?
—ನನ್ನ ತಾಯಿ ಎಲ್ಲಿ ?'

ಕನ್ನಡರ ನಾಡಿನಲಿ
ಚಿನ್ನದಾ ತೊಟ್ಟಿಲಲಿ
ಹೆಸರಿಟ್ಟು ಅಸುವಿಟ್ಟು ಹೋದಳೆಲ್ಲಿ ?
—ನನ್ನ ತಾಯಿ ಎಲ್ಲಿ ?

## ೧೨ ನಕ್ಷತ್ರ ಗಾನ

ಅರ್ಥವಿಲ್ಲದ ನುಡಿಗೆ

ಅರ್ಥಗೂಡಿಸಿ ಅದಕೆ

ಕನ್ನಡದ ಕಳೆಯಿಟ್ಟ ತಾಯಿ ಎಲ್ಲಿ ?

—ನನ್ನ ತಾಯಿ ಎಲ್ಲಿ ?'

ತಾಯಿ ಮಗುವು ಆಡುವಲ್ಲಿ

ಸುಳಿವಳವಳು ಭಾವದಲ್ಲಿ

ಭಾವದೇವಿಯಾಗಿ ಇಳಿವಳೆನ್ನ ತಾಯಿ

—ನನ್ನ ತಾಯಿ.

# ತಿರಿವ ಮುದುಕಿ

ಜಗದ ಉದ್ದ ಜಗದ ಅಗಲ
ದಾರಿ ಹಬ್ಬಿದೆ,
ಕಾಲು ದಾರಿ ಹಾಳು ದಾರಿ
ಬಾಳ ತಬ್ಬಿದೆ.

ಬೇಡಿ ಬಳಲಿ ಊರ ಒಳಗೆ
ಬರಿದೆ ತಿರುಗಿ ಮನೆಗೆ ಮನೆಗೆ
ಮರಳಿ ಬಂದರೇನು ಕೊನೆಗೆ
ದಾರಿ ಕಾದಿದೆ.
ಇಳೆಯೊಳೆನ್ನ ಪಾಲಿಗಿಂದು
ಒಂದೆ ಉಳಿದಿದೆ.

ಊರು ಉಂಟು : ನನ್ನದಲ್ಲ
ಮನೆಗಳುಂಟು : ನನ್ನದಿಲ್ಲ
"ಬಾರೆ ಮುದುಕಿ" ಎಂಬರಿಲ್ಲ
ಇಡಿಯ ಊರಲಿ,
ಯಾರಿಗೆಂದು ನನ್ನ ಎದೆಯು
ಅಳಲ ತೋಡಲಿ.

## ೧೪ ನಕ್ಷತ್ರ ಗಾನ

ಸಾಕು ಪಶುವು ಮೇದು ಬಂದು
ತನ್ನ ಕೊಟ್ಟಿಗೆಯಲಿ ನಿಂದು
ಮರೆಯೊಳಿರುಳ ಕಳೆಯುವಂದು
ನನ್ನದೀ ಗತಿ
ಮನುಜ ಜನುಮವೇಕೆ ಬಂತು ?
ಅರಿವುದೇ ಮತಿ ?

ಪಗಲು ತಿರುಗಲೆನಗೆ ಹಾದಿ
ಇರುಳು ಮಲಗಲೊಂದು ಬೀದಿ
ಬರಿಯ ಹಾದಿ, ಬರಿಯ ಬೀದಿ
ಬಾಳ ಬಯಲಲಿ
ಬರುವುದೆಂದು ಒಲವಿನುಲಿಯು
ಮೇಲಿನಿಂದಲಿ ?

ಪಂಚ್ಚಿ ನಾನು ! ನನ್ನ ಹಾದಿ
ನನಗೆ ಗತಿಯು, ಅದನು ದೂರಿ
ಪಡೆವುದೇನು ?—ಮರುಕ ತೋರಿ
ನಡೆಸುತಿರುವುದು.
ಮನದಿ ಮೇಲಿನವನ ಪೆಸರ
ನುಡಿಸುತಿರುವುದು.

# ಕುರುಡ ಹೂಗಾರ್ತಿ

ಅಂದು ಕಂಡೆನು ನಾನು ಎಂದು ನೋಡದ ನೋಟ
ದಿಟವೊ, ಸ್ವಪ್ನವೊ, ಇಂದು ಸಂದೇಹದಾಟ.

ಎಳೆವಯದವಳು ಕನ್ನೆ, ಹೆಮ್ಮಕ್ಕಳಲಿ ರನ್ನೆ
ವಿಧಿಯೇಕೆ ಕುರುಡುತನವಿಟ್ಟನಲ್ಲಿ?
ಚೆಲುವಿನಾ ಲಲನೆಯನು ರೂಪಿಸುವ ಸಮಯದಲಿ
ವಿಧಿ ತಾನೆ ಕುರುಡನಾದನೆ ಕುರುಡರಲ್ಲಿ ?

ಏನವಳ ಮನದ ಬಗೆ ! ಎಂತಹುದೊ ಮನದ ಬಗೆ
ಕುರುಯಾಡಿದರು ಅವಳೆ ಹರ್ಷಮೂರ್ತಿ !
ಕಣ್ಬೆಳಕು ಹಿಂಗಲೇನವಳ ಅಂತರ್ಯದಲಿ
ಬೆಳಗಿತ್ತು ಪರಿಶುದ್ಧ ಜೀವಜ್ಯೋತಿ !

"ಇದೊ ಕೊಳ್ಳಿ, ಇದೊ ಕೊಳ್ಳಿ ಮೃದು ಮಧುರ ಪುಷ್ಪಗಳ
ಕುರುಡಿ ನಾ, ಚೆಲುವೆಂತೊ ಕಾಣಲಾರೆ
ತಾಯಿ ಪೃಥಿವೀ ದೇವಿ ನೀಡಿದೀ ಕುಸುಮಗಳ
ತಂದಿರುವೆ ನಿಮಗೆಂದೆ, ಕೊಳ್ಳಿ ಮನವಾರೆ"

## ೧೭ ನಕ್ಷತ್ರ ಗಾನ

ಎಂದು ಹಾಡುತ ತಂಗಿ ಮಾರುತಿರ್ದಳು ಹೂವ
ಕೌತುಕವನೇ ಜನಕೆ ಮಾರಿದಂತೆ
ಕೊಂಡವರು ಕೊಳ್ಳದವರೆಲ್ಲರೂ ಕೂಡಿಯೇ
ಪರಿಶುದ್ಧ ಹರುಷವನು ಹೊಂದುವಂತೆ

ಏನು ಸಂಗೀತವದು ! ಎಂಥ ಕೋಮಲ ಕಂಠ !
ಈಗಲೂ ಕಿವಿಗಮೃತ ಕರೆಯುತಿಹುದು.
ಅವಳ ಚೆಲುವಿನ ನಿಲವು ಸರಳಗಮನದ ಗೆಲುವು
ಇಂದಿಗೂ ಕಣ್ಣದಿರು ಕಟ್ಟಿರುವುದು.

ಪಾಪವಾಸನೆಯೆಂಬ ಗಾಳಿ ಸುಳಿಯದು ಅಲ್ಲಿ
ಅವಳ ಚೆಲ್ವಿಕೆಯಲ್ಲಿ ಅದುವೆ ಚೋದ್ಯ !
ಸ್ವರದಲ್ಲಿ ಯಾವುದೋ ಸ್ವರ್ಗೀಯ ಆನಂದ
ನೆಲಸಿತ್ತು ಅದು ಪಾಪಿಗೆಂತು ಸಾಧ್ಯ ?

ಸಹಜಸುಂದರವಾದ ಛಂದದಲಿ ಸಾಗಿತ್ತು
ಅವಳ ಜೀವನವು ಸಂಗೀತಲಹರಿ !
ಹಣವು ಬಂದರು ಸರಿಯೆ, ಬಾರದಿದ್ದರು ಸರಿಯೆ
ಮನದ ಸಂತೃಪ್ತಿಯೇ ಸೌಖ್ಯದ ಝರಿ.

ಕಣ್ಣು ಕತ್ತಲೆಗವಿದ ಮೊಗದ ಸಂಪದವಿಂತು
ಕಣ್ಣಿದ್ದರಿನ್ನಾವ ಕಾಂತಿಯುಲ್ಲಸವೋ!
ಕಣ್ಣಿಲ್ಲದಿಹ ಕೊರಗು ಪರರಿಗಲ್ಲದೆ ಪ್ರಮದೆ
ಕೊಂಗನರಿಯಳು ಅವಳದೆಂಥ ಸಂತಸವೋ!

# ನನ್ನ ನಿನ್ನ ಮಾತು

"ಎಲ್ಲರ ಮಾತು ಕೇಳಿಹೆನಮ್ಮಾ
ಎಲ್ಲ ಸಪ್ಪೆ ಮಾತು !
ಹಾಲು ಸಕ್ಕರೆ ಬೆರಸಿದ ಹಾಗೆ
ನನ್ನ ನಿನ್ನ ಮಾತು.

ಮನೆಯಲಿ ಮುತ್ತಿನ ಮಳೆ ಸುರಿದಂತೆ
ನನ್ನ ನಿನ್ನ ಮಾತು
ಎನಿತು ಸುರಿದರೂ ಸಾಕೆಂದೆನಿಸದು
ನನ್ನ ನಿನ್ನ ಮಾತು.

ಚಿಕ್ಕೆಯಂತೆ ಥಳಿಥಳಿಸುವುದಮ್ಮಾ
ನನ್ನ ನಿನ್ನ ಮಾತು
ನಿನ್ನ ನಗೆಯು ಬೆಳಕನ್ನೇ ಹೋಲುವುದು
ನನ್ನ ನಿನ್ನ ಮಾತು.

ಕಾರಂಜಿಯೊ ಎನೆ ಪುಟಿಯುವುದಮ್ಮಾ
ನನ್ನ ನಿನ್ನ ಮಾತು
ಪುಟಿ ಪುಟಿದಂತೆ ನಲಿಯೋಣಮ್ಮಾ
ಎಲ್ಲವನ್ನು ಮರೆತು.

ನೀನು ಕಲಿಸಿದೀ ಕನ್ನಡ ಮಾತು
ಚಿನ್ನದಂಥ ಮಾತು !
ನಿನ್ನ ಮೈಯ ಬಣ್ಣವನೆ ಕದ್ದಿಹುದು
ಅಂತೆ ಇರುವುದಿಂತು

ಕಂಪು ತುಂಬಿ ತುಳುತುಳುಕುವುದಮ್ಮಾ
ನಿನ್ನ ಮಾತಿನಲ್ಲಿ,
ಯಾವ ಹೂವು ಅರಳಿದೆ ಹೇಳಮ್ಮಾ
ನಿನ್ನ ಹೃದಯದಲ್ಲಿ ?

ನುಡಿಯಲು ನೀ ತುಟಿ ತೆರೆಯುವುದೇ ತಡ
ಉಕ್ಕುವುದಕ್ಕರತೆ
ಅಮ್ಮಾ ನಿನ್ನೀ ಪುಟ್ಟೆದೆಯಲ್ಲಿ
ಎಷ್ಟಿರುವುದೆ ಪ್ರೀತಿ ?'

"ಕಂದಾ, ಕಡಲಲಿ ತೀರದ ನೀರನು
ತುಂಬಿರುವಾ ದೇವ
ಎಂದೂ ತೀರದ ಪ್ರೀತಿಯು ನನ್ನೀ
ಎದೆಯಲಿ ತುಂಬಿರುವ."

# ಹೂದಿಂಗಳ ರಾಣಿ

ಬಂದೆಯಾ, ಬಾ, ಜಾಣೆ
ಬೆಳುದಿಂಗಳ ರಾಣಿ

ತಿಳಿಬೆಳಕಿನ ಬಲೆಯು
ಬೀಸುತ ಮೆಲುನಗೆಯು
ಸೂಸುತ ಸರಿ ಇರುಳ
ತಿಳಿಬಾನಿನ ವಿಮಲ
ಶಾಂತಿಯ ಸಮಯದಲಿ
ಸುಳಿಯುತ ಬೆಡಗಿನಲಿ
ಬಂದೆಯಾ ಬಾ, ಜಾಣೆ
ಹೂದಿಂಗಳ ರಾಣಿ.

ಬಿಳಿಮೋಡದ ಸೆರಗ
ಎಳೆದೊಮ್ಮೆ ಬೆಡಗ
ಬೀರುತಲಿನ್ನೊಮ್ಮೆ
ಸರಿಸುತ ಮೆಲ್ಲ ಜುಮ್ಮೆ-
ನ್ನುವವೊಲು ಮೆಲ್ಲ ತೋರಿ
ಮರು ನಿಮಿಷದೆ ಜಾರಿ
ಮುಸುಕಿಡುತಿಹ ಜಾಣೆ
ಬಿನ್ನಾಣದ ರಾಣಿ.

ದಿನಕೊಂದು ಚೆಲುವು
ಮೈಗೊಡುವ ನೋಟ
ತೆರೆಮರೆಗಳ ಒಲವು
ಹೂಡಿಹುದೀ ಆಟ
ಜೀವನರಸದೊರತೆ
ತರತರದೊಳಗಿಹುದೇ ?
ಉತ್ತರಿಸೌ ಜಾಣೆ
ರಸಿಕರ ಸಾಮ್ರಾಜ್ಞೆ.

ಎಲ್ಲಿಯದೀ ಹಾಸ ?–
ಸೌಂದರ್ಯವಿಲಾಸ !
ಎತ್ತಣದೀ ಕಾಂತಿ ?–
ಇಳೆಗಿಳಿದಿಹ ಶಾಂತಿ !
ನೀನೆಲ್ಲಿಂ ಬಂದೆ ?
ಈ ಚೆಲುವನು ತಂದೆ ?
ಬಿತ್ತರಿಸೌ ಜಾಣೆ
ಮಾಟದ ಮಾರಾಣಿ.

# ಮಲ್ಲಿಗೆಗೆ

ಎಲೆ ಎಲೆ ಮಲ್ಲಿಗೆ ಬಳುಕುವೆ ಮೆಲ್ಲಗೆ
ಬಳ್ಳಿಯ ಮೇಲೇರಿ
ಬೀಸುವ ಗಾಳಿಗೆ ಸೂಸುವೆ ಸೌರಭ
ಅನುರಾಗವ ಬೀರಿ

ಚಿಕ್ಕೆಯ ತೆರದಲಿ ನಕ್ಕು ನಲಿವೆ ನೀ
ನಿರ್ಮಲ ಹರ್ಷದಲಿ
ನಿನ್ನೀ ತಿಳಿನಗೆ ಸೆರೆಹಿಡಿವುದು ಬಗೆ-
ಯನು ಅರೆನಿಮಿಷದಲಿ.

ಹಸುರೆಲೆಗಳ ಮರೆಯಲಿ ನೀನವಿತಿರೆ
ಸುಳಿಗಾಳಿಯು ಸೋಕಿ
ಮುಸುಕನು ನಸು ಓಸರಿಸಲು ಎಸೆವುದು
ನಿನ್ನ ರೂಪರಾಶಿ.

ಗಾತ್ರವೊ ಕಿರಿದು; ಗುಣವೋ ಹಿರಿದು;
ಇದೇ ನಿನ್ನ ರಹಸ್ಯ
ಕಿರಿ ರೂಹಿನಲಿ ಅರಳಿದೆ ತರಳೆ
ಜೀವನ-ಸ್ವಾರಸ್ಯ.

ನಿನ್ನೊಳು ಸರಲತೆ ಸೌಂದರ್ಯದ ಜತೆ-

ಯಲಿ ಬಾಳುತಲಿಹುದು

ನರುಗಂಪಿನ ಸಿರಿ ಒಲವಿನ ನಲವಿನ

ಕತೆ ಹೇಳುತಲಿಹುದು !

ಈ ಬೆಳುನಗೆಯಲಿ ಚೆಲುವಿನ ಮೊಗವಲಿ

ತುಳುಕುವ ಆನಂದ

ಅದಾವ ಪೂರ್ವದ ಉದಾರ ಹೃದಯವು

ಚೆಲ್ಲಿದ ಪ್ರತಿಬಿಂಬ !

# ಹಾಸ ನರ್ತಕಿ

ನಗೆಯೆ, ನಲ್ಮೆಯ ಕೆನೆಯೆ !
ಬಗೆಯ ಸುಗ್ಗಿಯ ತೆನೆಯೆ,
ಹೇಳು ನಿನ್ನ ನಿವಾಸವೆಲ್ಲಿ ತಾನೆ ?

ಎಂತೊಲಿದು ನೀ ಪೊಳೆದು
ಮೊಗದಲ್ಲಿ ಮಾರ್ಪೊಳೆದು
ಕುಣಿವೆ, ರಸಿಕರ ಮನವ ತಣಿಪ ಜಾಣೆ

ಯಾರ ಆಮಂತ್ರಣಕೆ
ನೀನೊಪ್ಪಿ ಕುಣಿಯಲಿಕೆ–
ವದನ–ರಂಗಕೆ ಬರುವೆ ಹಾಸ–ನರ್ತಕಿಯೆ

ನಿರಿಯ ಚಿಮ್ಮುತ ಚಲಿಸಿ
ಕಾಂತಿ–ಸಲಿಲವ ಹರಿಸಿ
ಸೂರೆಗೊಳ್ಳುವೆ ಮನದ ಹರ್ಷನಿರ್ಭರೆಯೆ !

ಮಲ್ಲಿಗೆಯ ಮೈಮೇಲೆ
ಬೆಳುದಿಂಗಳಿನ ಲೀಲೆ
ಸಾಗಿದಂತಹುದಲ್ಲೆ ನಿನ್ನ ಹೊಳವು,

ಹಿಗ್ಗುದೆರೆ ಹೊರೆಯೇರಿ
ಬೆಳ್ನೊರೆಯ ಹೂ ಕೆದರಿ
ಸುಳಿವ ಪರಿ ಇಹುದೇನೆ ನಿನ್ನ ಸುಳುವು ?

ನಮ್ಮೆಲ್ಲ ಇರವಿನಲಿ
ಇಳಿದು ಔದಾರ್ಯದಲಿ
ತೋರ್ ನಿನ್ನ ನಿಲವ ಸುವಿಲಾಸ–ಶೀಲೆ

ಪುಷ್ಪಾಂಜಲಿಯನೆರಚಿ
ದೇಹದೀಪ್ತಿಯ ಸೂಸಿ
ಚರಣ–ಕಿರಣದೊಳಾಡೆ ಲಾಸ್ಯಲೋಲೆ !

# ಲಿಪಿ-ಲತೆ

ಎಂಥ ಚೆಂದದ ಬಳ್ಳಿ ಚೆಲ್ಲವರಿದಿಹುದಿಲ್ಲಿ
ಚೆಲುವನರಸುವ ಜಾಣ ಬಂದು ನೋಡು.
ಕನ್ನಡರ ಲಿಪಿಯಲ್ಲಿ ಕನ್ನಡದ ಕಲೆ ಎಲ್ಲೆ–
ಯನೆ ನಿಲುಕಿ ನಿಂದಿಹುದ ನೋಡಿ ಹಾಡು.

ನಾಡ ಸೊಬಗೇ ಮರಳಿ ನಾಡಿಗರ ಹೃದಯದಲಿ
ಹೊಳೆದು ಕರದಿಂದಿಳಿದು ಬಂದಿರುವುದೇ ?
ಹೂಬಳ್ಳಿಯಂದದಲಿ ಸುಳಿದಿಂತು ಚೆಂದದಲಿ
ಲಿಪಿಯ ರೂಪವನಾಂತು ನಿಂದಿರುವುದೇ ?

ಮೊಗ್ಗಿನಂದದಿ ಕೆಲವು ಮಲರಿನಂದದಿ ಪಲವು
ಕುಡಿ, ಹೀಚು. ಮಿಡಿ ಕಾಯ್ಗಳಂತೆ ಕೆಲವು
ಕನ್ನಡಕ್ಕರಗಳಿವು ಬಳ್ಳಿಯನು ಏರಿಹವು ;
ಬಗೆಯ ಬಳ್ಳಿಯನೆ ಅಲ್ಲಾಡಿಸುವವು.

ಕಲ್ಲಿನಲಿ, ಕಾವ್ಯದಲಿ, ಓಲೆಯಲಿ ಲೋಹದಲಿ
ಭಿತ್ತಿಯಲಿ ಈ ಬಳ್ಳಿ ಸುಳಿದಿರುವುದು.
ಚಾಲುಕ್ಯ ಕಲಚುರ್ಯ ಹೊಯ್ಸಳಾಧೀಶ್ವರರ
ಯುಗಗಳಲಿ ಹೊಗರೇರಿ ಹರಡಿರುವುದು.

ಕನ್ನಡಿಗರಾಂತರ್ಯದಿಂದಲೀ ಸೌಂದರ್ಯ
ಲತೆಕೊನರಿ ನನೆಕೊನೆಯ ತಳೆದು ಬೆಳೆದು
ಕನ್ನಡಮ್ಮನ ಕೊರಳ ಸರಕೆ ಮಲ್ಲಿಗೆಯರಳ
ಸಲ್ಲಿಸುವುದವಳಡಿಯ ಬಳಿಗೆ ಸುಳಿದು.

# ಕವಿ ರವೀಂದ್ರ

ಕವಿಯೋ ಜೀವನ–ರವಿಯೋ ಸ್ವರದಲಿ
ಬಾಳನು ನೆಯ್ದಿರುವೆ
ಮೀಯಿಸಿ ಭುವನವ ನವನವ ರಸದಲಿ
ಬಣ್ಣವ ಹೊಯ್ದಿರುವೆ

ಕಲ್ಪನೆ–ಕಿರಣಗಳಿಂ ಹೊಂಬೆಳಗಿನ
ಲೋಕವ ರಚಿಸಿರುವೆ
ಅದರಲಿ ಚೆಲುವಿನ ಒಲವಿನ ನಲುಮಿನ
ಹೊನಲನು ಹರಿಸಿರುವೆ

ನಿನ್ನ ಸುಯ್ಲಿನೆಲರಿಗೆ ಸಲೆ ಸೋತು
ಹೂಬಿಟ್ಟಿತು ಮುಗಿಲು
ನಿನ್ನ ದನಿಗೆ ದಳವೇರಿ ತಾರೆಗಳ
ಧರಿಸಿತು ಈ ನೆಲವು

ಸ್ವರತರಂಗದಲಿ ಭಾವತರಂಗವ-
ನೆಬ್ಬಿಸಿದವ ನೀನೇ
ಅಂತರಂಗದಲಿ ಭುವನರಂಗವನು
ಬಿಂಬಿಸಿದವ ನೀನೇ

ಬತ್ತಿದ ಎದೆಯಲಿ ಮುತ್ತಿನರಸವನು
ಚಿಮ್ಮಿಸಿದವ ನೀನೇ
ಕತ್ತಲೆ–ಗವಿಯಲಿ ರತ್ನದ ಜ್ಯೋತಿಯ
ಹೊಮ್ಮಿಸಿದವ ನೀನೇ

ನಶ್ವರದಲಿ ಶಾಶ್ವತದೊಳನಿಲವನು
ಹೊಳೆಯಿಸಿದವ ನೀನೇ
ಜನನ ಮರಣಗಳ ಒಂದೆ ಬೆಳಕಿನಲಿ
ಬೆಳಗಿಸಿದವ ನೀನೇ

ನಿನ್ನುಸುರಿನ ತೆರೆತೆರೆಗಳೊಳೊಗೆಯಿತು
ತಿಳಿ ಹಾಡಿನ ಛಂದ
ಬೆಳಂದಿಂಗಳ ತೆರ ಇಳೆಗಿಳಿದಿತು ಪರ–
ಲೋಕದ ಆನಂದ !

ನಿನ್ನೆದೆಯಾಳದಿನುರೆ ಹೊರ ಹೊಮ್ಮಲು
ಭಕ್ತಿಯ ಪಾರಮ್ಯ
ಗೀತಾಂಜಲಿಯಲಿ ತಾಂ ಜೇಂಗಟ್ಟಿತು
ಅದರಿಂದೇಂ ರಮ್ಯ ?

ನಿನ್ನ ಸಂಗದಲಿ ಕಾವ್ಯಗಂಗೆಯಲಿ

ತೇಲಿತು ಜಡಜಗವು !

ನಿನ್ನ ಕೀರ್ತಿಯಲಿ ವಿಮಲ ಸ್ಫೂರ್ತಿಯನು

ತಾಳಿತು ಭಾರತವು.

ಪಾರ್ಥನಂದು ಬಿಲ್ಲಾಂತು ನಿಂದು ಪುಂ–

ಖಾನು ಪುಂಖವಾಗಿ

ಶರಗಳೆಸೆಯೆ ದಿವಕಾಯ್ತು ದಾರಿ ಸೋ

ಪಾನ–ಶ್ರೇಣಿಯಾಗಿ;

ಅಂತೆ ಕರುಳ ಶಿಂಜಿನಿಯು ತೀಡಿ ಭಾ–

ವಾನುಭಾವಗತಿಯಿಂ

ಶರಣನಾತ್ಮ ಪರಮಾತ್ಮಕೇರೆ ನೀ

ಗೈದೆ ಗೀತಪಥಮಂ.

# ಮೂಡಿ ಬಂದಿದೆ ಸೊಗಸು

(ರವೀಂದ್ರರ ಗೀತವೊಂದರ ಅನುವಾದ)

ಈ ನಾಡಿನಲಿ ನಾನು ಮೂಡಿ ಬಂದುದೆ ಸೊಗಸು
ಭಾರತವ ಪ್ರೀತಿಸುವ ಭಾಗ್ಯವೆನಗಾಯ್ತು.
ಅರಸಿಯ್ಯೆಸಿರಿ ತಾಯಿಗಿಲ್ಲದಿರಲೇನು ?—
ಅವಳ ಒಲುಮೆಯ ಸಿರಿಯು ನನ್ನದಾಯ್ತು.

ಎಲ್ಲಿಲ್ಲದಿಹ ಕಂಪು ಅವಳ ಅಲರುಗಳಿಂದೆ
ನನ್ನೆದೆಯು ಸಿರಿಯಾಗಿ ಸೂಸುತಿಹುದು.
ವಿಮಲ ಸೌಂದರ್ಯದಿಂ ಹೃದಯವನು ತುಂಬುವೀ
ಬೆಳ್ದಿಂಗಳಿನ್ನೆಲ್ಲಿ ಬೆಳಗಲಹುದು ?

ನನ್ನ ಕಣ್ಣಿಗೆ ಹೊಳೆದ ಮೊತ್ತಮೊದಲಿನ ಬೆಳಕು
ಭಾರತದ ಗಗನದಿಂದಿಳಿದು ಬಂತು,
ತೆರೆದ ಕಣ್ಣುಗಳೊಮ್ಮೆ ಮುಚ್ಚಿ ಮುಗಿಯುವ ಚಣದಿ
ಅದೆ ಬೆಳಕು ಮುತ್ತಿಡಲು ಪುಣ್ಯವೆಸಿತು !

# ಅನುಭವ ಮಂಟಪ

ದೂರದ ತೀರದ ಕಿರಣವು ಬರುತಿದೆ
ಮಧ್ಯದ ತಮವನು ತೆರೆತೆರೆದು,
ಎದೆಯಲಿ ತನಿವೆಳಗಿನ ರೂಪವನದು
ಬರೆಯುತಲಿದೆ ಕಾಲನು ಜರೆದು.

ಚಿತ್ತದಿ ಚಿತ್ರವು ಬಿತ್ತರಗೊಳುತಿದೆ
ಚೆಲುವಿನ ಸುಳುಹಿನೊಳದು ಸುಳಿದು,
ಕನ್ನಡಿಗರ ಕಲ್ಯಾಣದ ಕಾಲದ
ಕಲ್ಯಾಣದ ರೇಷೆಯನೆಳೆದು.

ನಗರದ ಹೃದಯವೆ ತಾನೆನೆ ತೋರ್ಪುದು
ಏನದು?– ಅನುಭವ ಮಂಟಪವು,
ಸುತ್ತಲು ಕಾಂತಿಯು ಚಿಮ್ಮುತಲಿರುವುದು.
ಬೆಳಕಿನೊಳುಕ್ಕಿದೆ ಅನುಭವವು.

ಅನುಭವದಾಗರದಾ ಹೆಬ್ಬಾಗಿಲು
ತೆರೆದಿದೆ, ತೋರಿದೆ ನಲ್ನೋಟ;
ಮನವನು ಘನದೆಡೆ ತಿರುಗಿಸಲೆಂದದೊ !
ನೆರೆದಿದೆ ಶಿವಶರಣರ ಕೂಟ.

ಮಂಡಿಸಿದಾ ಶಿವಶರಣರ ಮಧ್ಯದಿ
ಸಿಂಹಾಸನದೊಳದಾರಲ್ಲಿ ?
ಕಣ್ಣೊಳು ಆತ್ಮದ ಐಸಿರಿ ತುಳುಕಿದೆ
ಪ್ರಭು ಇಳಿದಿರುವನು ಮರ್ತ್ಯದಲಿ !

ಪ್ರಭುವಿನ ಬಳಿಯಲಿ ಮಂದಸ್ಮಿತದಲಿ
ಮನವನು ಮೀಯಿಪನಾರಲ್ಲಿ ?
ಭಕ್ತಿಯ ಬೆಳಕನು ಸಲೆ ಹರಡಿರುವನು
ಬಸವಣ್ಣನು ಸಲ್ಲೀಲೆಯಲಿ.

ಅವರಿರ್ವರ ಸನಿಹದೊಳದೋ ! ಮೆರೆದಿದೆ
ಪುಣ್ಯದ ನೆಲೆವನೆ ಪೆಣ್ಮೂರ್ತಿ.
ಮುಖದೊಳು ನಿಂದಿರುವಳು ಮಹದೇವಿಯು
ಮುಖಕೇರಿದೆ ಚಿತ್ತಸ್ಫೂರ್ತಿ,

ಏನಿದು ! ಎಂತಹ ಅಮೃತದ ಧಾರೆಯು
ಸೂಸಿದೆ ಸಭೆಯೊಳಗೆಂಬವೊಲು
ಅನುಭಾವವು ಕನ್ನಡದಲಿ ಹೊಮ್ಮುತ
ಹರಿಯುತಲಿದೆ ಕಾಂತಿಯು ಹೊನಲು.

# ಅಕ್ಕಮಹಾದೇವಿ

ನಮ್ಮ ನಾಡಿನಾವ ಪುಣ್ಯದಿಂದ, ದೇವಿಯೇ
ಚೆನ್ನನೊಲಿದ ರನ್ನೆ, ನೀನು ಮೂಡಿ ಬೆಳಗಿದೆ ?
ಥಳಥಳನೆ ತೊಳಗಿದೆ !

ನಿನ್ನ ಸ್ಥೈರ್ಯವೆಂಥದಮ್ಮ, ಧೈರ್ಯವೆಂಥದು !
ನೀನು ನೆಚ್ಚಿನಿಂದವೋಘ ಯೋಗವೆಂಥದು !
ಮನವನೆತ್ತುವಂಥದು
ಮೇಲಕೆತ್ತುವಂಥದು.

ಹೆಣ್ಗಳಲಿ ನಿನ್ನ ಸರಿ
ಭಕುತಿ ಝರಿ, ಮುಕುತಿ ಸಿರಿ
ಇನ್ನದಾರದು ?
ಇನ್ನುವರೆಗೆ ತೋರದು.

ಚೆನ್ನಮಲ್ಲಿಕಾರ್ಜುನಂಗೆ ನೀನೆ ಕಣ್ಮಣಿ
ನೀನೆ ಶಿವಾನುಭವ ಮಂಟಪದ ಶಿಖಾಮಣಿ,
ಅಸಮಾನ ಪೆಣ್ಮಣಿ.
ಶಿವ ಸಂಸ್ಕೃತಿಯ ಕಣಿ.

## ೩೪ ನಕ್ಷತ್ರ ಗಾನ

ನಿನ್ನ ನುಡಿ ಹೊನ್ನ ಕಿಡಿ
ಜಸದ ಕುಡಿ, ಹೊಸತು ಮಿಡಿ
ಎಸೆವ ಸುಗ್ಗಿಯುಂ
ಭಕ್ತಿರಸದ ಬುಗ್ಗೆಯುಂ

ನಿನ್ನ ವಾಣಿಯಿಂದ ನಮ್ಮ ನುಡಿಗೆ ಕಳೆಯನು
ಬೀರಿ, ಹರಿಯಿಸಿರುವೆ ವಚನಕಾವ್ಯ—ನದಿಯನು
ಬೆಳೆಯಿಸಿರುವೆ ಬೆಳೆಯನು
ಅನುಭವದ ನೆಲೆಯನು.

ವಚನದಲಿ ಒಲುಮೆಯುಲಿ
ಕೆಚ್ಚಿನುಲಿ, ನೆಚ್ಚಿನುಲಿ
ಮೇಳಗೂಡಿವೆ
ದಿವ್ಯಗಾನಗೈದಿವೆ.

ನಿನ್ನ ಜೀವನದಲಿ ಅರಳಿರುವುದು ಕಾವ್ಯವು
ಎನಿತು ಕಾಲ ಜಾರಲೇನು ?—ನಿತ್ಯನವ್ಯವು
ಅನಂತ ರಮ್ಯವು !
ಇಹುದೆ ಅದಕು ದಿವ್ಯವು ?

ದೇವನಲಿ ಪ್ರೇಮದಲಿ
ಬೆರೆದು ನಲಿ ನಲಿಯುತಲಿ
ಸುಳಿದ ಜೀವನ
ಅದು ಅಸಾಧ್ಯ ಸಾಧನ.

ಎಂಥ ಎಳೆಯುತನದಿ ಪಂಥತೊಟ್ಟು ನಡೆದೆಯೌ ?
ಭಕ್ತಿ ಜ್ಞಾನ ವೈರಾಗ್ಯದ ದಾರಿ ಹಿಡಿದೆಯೌ
ಗುರಿನಂಬಿ ನಡೆದೆಯೌ
ನಿಜದೊಳಿಂಬುವಡೆದೆಯೌ.

ಚೆನ್ನ ಪತಿ, ನೀನೆ ಸತಿ
ಶಿವನೆ ಮತಿ ಅವನೆ ಗತಿ
ಎಂದೂ ಸಾಗಿದೌ–
ಅವನೊಳೊಂದು ಗೂಡಿದೌ.

ಎಂಟುನೂರು ವರುಷದಾಚೆಯಿಂದ ಇಂದಿಗೆ
ನಿನ್ನ ಕಿರಣ ಕೀರ್ತಿಪಥದಿ ತೂರಿ ಬಂದಿದೆ
ತೆರೆತೆರೆದು ನಿಂದಿದೆ
ಕೌತುಕವ ತಂದಿದೆ.

ಮರಳಿ ಅದೇ ರೂಪವನೇ
ತಳೆದು ಅದೇ ಜ್ಯೋತಿಯನೇ
ಬೀರಲಾರೆಯಾ ?
ದಾರಿ ತೋರಲಾರೆಯಾ ?

# ಕಸ್ತೂರಬಾ

ಕಸ್ತೂರಬಾ ನಿಮ್ಮ ಹೆಸರಿಗನುಗುಣವಾಗಿ
ಕತ್ತುರಿಯ ಪರಿಮಳವ ತಳೆದಿರಮ್ಮಾ
ಹೊರಗಣ್ಗೆ ನೀವಳಿಯಲೇನಂತೆ ?–ಭಾರತದ
ನಾಯಕನ ಸ್ಫೂರ್ತಿಯಾಗುಳಿದಿರಮ್ಮಾ.

ಭಾರತದ ಸೌಭಾಗ್ಯ ತಾನೆ ಮೈವೆತ್ತಂತೆ
ಮೂಡಿ ಮೋಹನನ ಕೈ ಹಿಡಿದಿರಮ್ಮಾ
ಕೊನೆಗವನ ಅಡಿಯಲ್ಲಿ ಎಲ್ಲವನು ಸಲ್ಲಿಸುತ
ಮುತ್ತೈದೆತನವ ನೀವ್ ಪಡೆದಿರಮ್ಮಾ.

ನಾಡದೇವಿಯ ಹಿರಿಯಭಕ್ತನವ ಬಾಪೂಜಿ
ನೀವಿಟ್ಟಿರವಗೆ ಕತ್ತುರಿಯ ತಿಲಕ
ನಾಡಸೇವೆಯ ದಾರಿಯಲಿ ಸಾಗುತಿರಲವನು
ಹರಡುತ್ತ ಬಂದಿರೌ ಜತೆಯ ಬೆಳಕ.

ಪತಿಯ ಜೀವನದೊಳೆಂತಂತೆ ಜನಜೀವನದಿ
ಸೌಶೀಲ್ಯ ಸೌರಭವ ಸೂಸಿಸೂಸಿ
ಮರೆಯಾದಿರೌ ತಾಯಿ, ಕಾಣದಿಹ ಕತ್ತುರಿಯ
ಪರಿಮಳವು ಬರದೆ ಯುಗಯುಗದಿ ಸೋಸಿ ?

# ಅಮರಜ್ಯೋತಿ

ತನುವಿನಾಸೆಯನ್ನು ಮೆಟ್ಟಿ
ಮನವ ಮೇಲಮೇಲಕೆತ್ತಿ
ನಿಜದ ಕೊನೆಯ ಮೊನೆಯ ಮುಟ್ಟಿ
ಜೈಸಿ ಬಂದನು.
ಜಗದ ಜನಕೆ ಬೆರಗು ಬಲೆಯ
ಬೀಸಿ ಬಂದನು

ನಾಡಿನಲ್ಲಿ ಹಗಲು ಇರುಳು
ಚಿಂತೆಯಿಂದ ಕವಿದ ಮುಗಿಲು
ತಿಳಿಯೆ, ಮಹಾ ಪುರುಷನವನು
ಏರಿ ಬಂದನು
ಜನದ ಮನಕೆ ವಿಮಲ ಹರುಷ
ಬೀರಿ ಬಂದನು.

ನಾಡನೆಲ್ಲ ತೀವಿದಂಥ
ಕತ್ತಲೆಯನು ತಪಸಿನಿಂದ
ಕಡೆದು. ಇರುಳಿನಾಳದಿಂದ
ಬೆಳಕ ತಂದನು
ಸತ್ಯವಿತ್ತ ವಿಜಯಮಾಲೆ
ಧರಿಸಿ ನಿಂದನು.

ಹೋದ ಉಸಿರು ಹೊರಳಿದಂತೆ
ಕಳೆದ ಸಿರಿಯು ಮರಳಿದಂತೆ
ಕಳಚಿದಲರು ಅರಳಿದಂತೆ
ಮರಳಿ ಬಂದನು
ತಿಳಿಯ ನಗೆಯ ಸುತ್ತ ಸೂಸಿ
ನಡುವೆ ನಿಂದನು.

ಅವನ ಜೀವ ಜನದ ಜೀವ
ವಾಗಿ ತುಳುಕಲವನ ಭಾವ
ಮಿಡಿದ ತೆರದಿ ನಮ್ಮ ಭಾವ
ಮಿಡಿಯೆ ಬಂದನು
ಎಲ್ಲರಂತರಂಗದಿಂದ
ಮೂಡಿ ಬಂದನು.

ಆತನೆಮಗೆ ಜೀವ ಜ್ಯೋತಿ
ಧರೆಗೆ ಅವನೆ ದಯಾಮೂರ್ತಿ
ಅವನೆ ನೀತಿ ಅವನೆ ಕೀರ್ತಿ
ನಮ್ಮ ಬಾಳಿಗೆ
ಅವನ ಬಾಳು ಬೆಳಗಲದುವೆ
ನಾಡಿನೇಳಿಗೆ.

# ಕೆರೆಯ ದಂಡೆಯಲಿ

ಅಂದು ಸ್ವಪ್ನ ಸೀಮೆಯಲಿ ಮೌನದಲಿ
ನಾನು ಸುಳಿಯುತಿರಲು
ಕಂಡ ಸೋಜಿಗವನಿಂದು, ನೀರೆ, ನಿನ
ಗೆಂದು ರೂಪಿಸುವೆನು.

ಕನಸು ನಾಡಿನಲಿ ಕೆರೆಯ ದಂಡೆಯಲಿ
ನಿಂದು ನೋಡುತಿದ್ದೆ
ಎನಿತು ನೋಡಲನಿತನಿತು ಕೌತುಕದ
ಕಡಲೊಳಾಳುತಿದ್ದೆ.

ಚಂದ್ರ ಕಾಂತಿಯಲಿ ಜಲದಶಾಂತಿ ಸೆರೆ
ಬೆರೆದು ನಲಿಯುತಿತ್ತು.
ಜಲತರಂಗದೊಡನಂತರಂಗ ಕೇಳಿ
ಬೆಳೆಸಲೆಳಸುತಿತ್ತು.

ಕೊಳದತುಂಬ ತಿಳಿಗೆಂಪು ಕಮಲಗಳ
ಎನಿತೊ ಎನಿತೊ ಕಂಡೆ
ಚೆಲ್ಲವರಿದ ಹೂವುಗಳ ಚೆಲುವ ಕಣ್–
ಗಳಲಿ ತುಂಬಿಕೊಂಡೆ.

ಅವುಗಳಲ್ಲಿ ಅರೆಬಿರಿದ ತಾವರೆಯ
ಮೊಗ್ಗದೊಂದು ತಾನೇ
ಕೊಳದ ಆಚೆಯಿಂದೀಚೆಗೆನ್ನೆಡೆಗೆ
ತೇಲಿಬಂತು ಜಾಣೆ,

## ೪೦ ನಕ್ಷತ್ರ ಗಾನ

ತೇಲಿ ಬಂದ ಆ ಮುಕುಲ ನನ್ನ ಬಳಿ
ನಿಂದಿತಂದದಿಂದ
ಚಂದ್ರಿಕಾ–ಜಲದಿ ಮುಳುಗಿ ಮಿಂದು ಹೊಗ–
ರೇರಿತೆನಿತು ಚೆಂದ !

"ಬೆರಗದೇನು?–ಮೃದುವಾಗಿ ಮುಟ್ಟಿನೀ
ಮೆಲ್ಲನೆನ್ನನೆತ್ತು."
ಎಂದು ಸೂಚಿಪಂದದಲಿ ತಾವರೆಯು
ನನ್ನ ನೋಡುತಿತ್ತು.

ತಾನೆ ಬಂದ ಆ ದೀನ ಪಂಕಜವ
ಕೈಗೆ ಕೊಂಡೆ ನಾನು
ಆದರ ಸ್ಪರ್ಶದಿಂದಮಿತ ಹರ್ಷಮಂ
ಪಡೆದೆ ಹೇಳಲೇನು !

ಯಾವ ಮಂಗಲಕೆ ದೇವನಾಜ್ಞೆಯಿಂ
ಮುಕುಲ ತೇಲಿಬಂದು
ಬೆರಳ ಸೋಂಕಿನಿಂದರಳಿ ನಿಂದಿತದು
ತುಂಬ ರಸಕೆ ಸಂದು.

ಬೆರಗು ಬೆರಗಿನಿಂದೊಗೆಯುವಂದದಿಂ
ನಿಮಿಷದಲ್ಲಿ ಚೆನ್ನೆ
ಶುಭದ ಸಂಗದಿಂ ಕಮಲದಂಗದಿಂ
ನೀನೆ ಮೂಡಿ ಬಂದೆ.

ಗಗನಮಂಡಲವು ಪೂರ್ಣ ಚಂದ್ರಮನ
ಧರಿಸಿ ಬೆಳಗುವಂತೆ
ನೊಸಲ ಮಧ್ಯವಲಿ ಮಿಸುಪ ಕುಂಕುಮವ
ಧರಿಸಿ ನಿಂತೆ ಮುಂದೆ

"ಶುಭವು ಎನ್ನಿ ಶುಭವೆನ್ನಿ" ಎನ್ನುತಲಿ
ಮಣಿದೆ ನೀನು ಪದಕೆ
ನಿನ್ನ ದನಿಗೆ ಮಾರ್ದನಿಯುನೀಯುಲಿದೆ
"ನಿನಗೆ ಶುಭವು" ಎಂದೆ.

ಕೊಳದ ಅಂಚಿನಲಿ ಸೊಬಗ ಸವಿಯಲೆಂ-
ದೊಬ್ಬನಿದ್ದೆನಂದು
ಒಂದು ಜೀವಕಿನ್ನೊಂದು ಜೀವ ಜತೆ-
ಗೂಡಿ ಬಂತು ಇಂದು

ಬಾಳತೋಟದಲಿ ಕಂಡ ನೋಟದಲಿ
ರಸವೆ ತುಂಬಿ ನಿಲಲು
ನೀರೆ, ನಿನ್ನ ಜತೆಯೊಂದೆ ಸಾಕು, ನಡೆ
ಜತೆಯೆ ನೀರು ನೆಳಲು.

ಎರಡು ಜೀವಗಳನೊಂದು ಭಾವದಲಿ
ಮೇಳಗೊಳಿಸಿದವನ
ರಸಿಕತನವ ಜತೆಗೂಡಿ ಹೊಗಳುವ
ಉಕ್ಕಿ ಬರಲಿ ಕವನ.

# ಹಚ್ಚೇವು ಕನ್ನಡದ ದೀಪ

ಹಚ್ಚೇವು ಕನ್ನಡದ ದೀಪ
ಕರುನಾಡದೀಪ ಸಿರಿನುಡಿಯದೀಪ
ಒಲವೆತ್ತಿ ತೋರುವಾ ದೀಪ ॥ ಹಚ್ಚೇವು ॥

೧

ಬಹುದಿನಗಳಿಂದ ಮೈಮರವೆಯಿಂದ
ಕೂಡಿರುವ ಕೊಳೆಯ ಕೊಚ್ಚೇವು
ಎಲ್ಲೆಲ್ಲಿ ಕನ್ನಡದ ಕಂಪು ಸೂಸ-
ಲಲ್ಲಲ್ಲಿ ಕರಣ ಚಾಚೇವು
ನಡು ನಾಡೆ ಇರಲಿ, ಗಡಿನಾಡೆ ಇರಲಿ
ಕನ್ನಡದ ಕಳೆಯು ಕೆಚ್ಚೇವು
ಮರೆತೇವು ಮರವ, ತೆರೆದೇವು ಮನವ, ಎರೆದೇವು ಒಲವ—ಹಿಡಿ ನೆನಪ
ನರನರವನೆಲ್ಲ ಹುರಿಗೊಳಿಸಿ ಹೊಸೆದು ಹಚ್ಚೇವು ಕನ್ನಡದ ದೀಪ

ಕಲ್ಪನೆಯು ಕಣ್ಣು ಹರಿವನಕ ಸಾಲು
ದೀಪಗಳ ಬೆಳಕ ಬೀರೇವು
ಹಚ್ಚಿರುವ ದೀಪದಲಿ ತಾಯ ರೂಪ
ಅಚ್ಚಳಿಯದಂತೆ ತೋರೇವು
ಒಡಲೊಡಲ ಕೆಚ್ಚಿನಾ ಕಿಡಿಗಳನ್ನು
ಗಡಿನಾಡಿನಾಚೆ ತೂರೇವು
**ಹೊಮ್ಮಿರಲು ಪ್ರೀತಿ ಎಲ್ಲಿಯದು ಭೀತಿ?—ನಾಡೊಲವೆ ನೀತಿ ಹಿಡಿ ನೆನಪ**
**ಮನೆಮನೆಗಳಲ್ಲಿ ಮನಮನಗಳಲ್ಲಿ ಹಚ್ಚೇವು ಕನ್ನಡದ ದೀಪ.**

೪

ಕರುನಾಡಿನರಿವ ನೆರೆ ತೀವಿ ಭಾವ–
ದಲಿ ಜೀವನಾಡಿ ನುಡಿಸೇವು
ತೆರೆತೆರೆದ ಕಣ್ಣಿನಲಿ ನೇಹವೆರೆದು
ನವ ಜ್ಯೋತಿಯನ್ನೆ ಮುಡಿಸೇವು
ನಮ್ಮನ್ನವುಂಡು ಅನ್ಯಾಯಗೈಯು
ವಂಥವರ ಹುಚ್ಚು ಬಿಡಿಸೇವು
ಇಹುದೆಮಗೆ ಛಲವು, ಕನ್ನಡರ ಬಲವು ಕನ್ನಡದ ಒಲವು–ಹಿಡಿನೆನಪ
ನಮ್ಮೆದೆಯ ಕೆಚ್ಚುನೆಚ್ಚುಗಳನೂಡಿ ಹಚ್ಚೇವು ಕನ್ನಡದ ದೀಪ,

ನಮ್ಮವರು ಗಳಿಸಿದಾ ಹೆಸರ ಉಳಿಸ–
ಲೆಲ್ಲಾರು ಒಂದುಗೂಡೇವು
ನಮ್ಮೆದೆಯ ಮಿಡಿಯುವೀ ಮಾತಿನಲ್ಲಿ
ಮಾತೆಯನು ಪೂಜೆ ಮಾಡೇವು
ನಮ್ಮುಸಿರು ತೀಡುವೀ ನಾಡಿನಲ್ಲಿ
ಮಾಂಗಲ್ಯಗೀತ ಹಾಡೇವು
ತೊರೆದೇವು ಮರುಳ, ಕಡೆದೇವು ಇರುಳ ಪಡೆದೇವು ತಿರುಳ-ಹಿಡಿನೆನಪ
ಕರುಳೆಂಬ ಕುಡಿಗೆ ಮಿಂಚನ್ನೆ ಮುಡಿಸಿ ಹಚ್ಚೇವು ಕನ್ನಡದ ದೀಪ.

# ಗರ್ಭಸ್ಥ ಶಿಶು

ತಾಯ್ತನವ ಪಡೆಯಲಿಹ ತುಂಬಿದೊಡಲಿನ ಮುಂಗುದೆ
ಪಾಳಿನಲಿ ಪವಡಿಸಿರಲು
ಮಾತೆಯುದರದ ರತ್ನ, ಗರ್ಭಸ್ಥ ಶಿಶು ಸ್ವಪ್ನ-
ದೊಳು ಸುಳಿದು ನುಡಿದುದೇನು ?

"ಮೇಲೆ ಬಾನಿನೊಳಿಲ್ಲಿ ದೇವ ಸಾನ್ನಿಧ್ಯದಲಿ
ನಲಿದಾಡುತ್ತಿದ್ದೆ ನಾನು
ಯಾವ ಸಾಫಲ್ಯವನು ಸಾಧಿಸಲು ಒಡಲಿನಲಿ
ಬರಮಾಡಿಕೊಂಡೆ ನೀನು ?

"ಎರಡು ಲೋಕಂಗಳಂತರದಿ ನಿಂತಿಹೆ ನಾನು
ನಿನ್ನ ಈ ಗರ್ಭದಲ್ಲಿ
ಬಿಟ್ಟು ಬಂದಿಹ ನಾಕ ಬರಲಿರುವ ಲೋಕಗಳು
ಕೂಡಿದಿಕ್ಕಟ್ಟಿನಲ್ಲಿ.

"ಒಂದು ನೆನಹಿನ ನೆಲೆಯುಂ, ಒಂದುಂ ತವಕದ ಸೆಲೆಯುಂ
ಭೂತ ಭವಿಷ್ಯತ್ತುಗಳಿಗೆ
ಸೆಳೆಯುತಿರಲತ್ತಿತ್ತ ನಾನು ನಿನ್ನನೆ ನಂಬಿ
ಬಂದಿಹೆ ಭವಿಷ್ಯದೆಡೆಗೆ.

"ಹೊಂಬೆಳಗು ತಂಬೆಳಗು ಪೊನಲಿಡುವ ನಾಡಿನಿಂ-
ದಿಲ್ಲಿ ಕಳುಹಿದನು ದೇವ
ನನ್ನ ಕಂಗಳಿಗಿಲ್ಲಿ ಕತ್ತಲೆಯು ಕವಿದಿಹುದು
ಬೆಳಕಿಗೆಳಸಿಹುದು ಜೀವ.

"ನಾನಲ್ಲಿ ಸುರರೊಡನೆ ಸುಧೆಯುಂಡು ಸುಖಿಸಿರ್ದೆ
ಇಲ್ಲಿ ಸುಖಕಾಣೆನಮ್ಮ
ಸುಧೆಗಿಂತ ನಿನ್ನ ಎದೆ ಹಾಲೆ ಸಿಹಿಯಂಬರಲ !
—ಅದು ದೊರೆವುದೆಂದಿಗಮ್ಮ ?

"ನಿನ್ನ ತೋಳೇ ತೊಟ್ಟಿಲಾಗಿ ತೂಗುವುದಂತೆ
ಎಂದು ನನಗದರ ಭಾಗ್ಯ ?
ನಿನ್ನ ಕನ್ನದ ನುಡಿಯು ತಿಳಿ ರಸದ ಪೊನಲಂತೆ
—ಎಂದು ನನಗದರ ಯೋಗ ?

"ನಿನ್ನ ಮುದ್ದಿನೊಳೊಲುಮೆ ತಿಳಿಲುಗಟ್ಟಿಹುದಂತೆ
—ಎಂದು ನನಗೀವೆಯದನು ?
ನಿನ್ನ ಕಣ್ಣಿನಲಿ ಸಿರಿಬೆಳಕು ತುಳುಕುವುದಂತೆ
ಅದನೆಂದು ಕಾಂಬೆ ನಾನು ?

“ಬಸಿರುತೊಟ್ಟಿಲ ವಾಸ ಬೇಸರಾಗಿಹುದೆನಗೆ
ತೋಳತೊಟ್ಟಿಲಲಿ ಪಡಿಸಿ
ತೂಗಿ ಜೋಗುಳವಾಡಿ ಎದೆಯ ತಣಿಸುವುದೆಂದು
ನಿನ್ನ ದನಿಯಮೃತವುಣಿಸಿ ?

“ನಿನ್ನ ಬಯಕೆಯ ಬೀಜ ಅಂತಿಂತು ಮೊಳೆದೆನ್ನ
ರೂಪವನೆ ತಾಳುತಿಹುದು
ನಿನ್ನ ಕರುಳಿನ ಬಳ್ಳಿಯೊಳು ಮೂಡಿದೀ ಮೊಗ್ಗು
ಕಣ್ಣೆದಿರು ಅರಳಲಿಹುದು.”

ಸ್ವಪ್ನ ಸುಖದಲಿ ಮಿಂದ ಮಾತೆ ಮಂದಸ್ಮಿತವ
ತಳೆದು ಕಂದೆರೆದಳಂದು
ಅಲ್ಲಿ ಇಲ್ಲೆಲ್ಲಿಯೂ ಬಾಳ್ ತುಂಬಿ ನಿಂದಿತ್ತು
ಅಮೃತಯೋಗಕ್ಕೆ ಸಂದು.

# ಜೀವತಂತು

ಇಳಿದು ಬಂತು ಇಳಿದು ಬಂತು
ಮೇಲಿನಿಂದ ಜೀವತಂತು

೧

ಇಂದ್ರವನದ ಸುಮುಷದಂತೆ
ಚಂದ್ರನಮಲ ಕಿರಣದಂತೆ
ಸ್ವಪ್ನ ಸುಖದ ಸ್ಮರಣದಂತೆ
ನೀಲದಿಂದ ಇಳಿದು ಬಂತು.

ಇಂಥ ಭಾವ ಇಂಥ ಹಾವ
ಜೀವದೊಡನೆ ಬೆರೆತು ಯಾವ
ಜಾವದಲ್ಲಿ ಮೂಡಿ ಮಾನವ
ಮೋಹಗೊಳಿಸಲಿಳಿದು ಬಂತು ?

ಕಣ್ಣೊಳುಣ್ಮುತಿರುವ ಕಳೆಯು
ತಾರೆ ಬಿಂಬಿಸಿರುವ ಕೆಳೆಯು
ಚಂದ್ರ ಚುಂಬಿಸಿರುವ ಕುರುಹು
ಮೊಗದ ನಗೆಯೊಳಾಂತು ಬಂತು.

೪

'ತನನ ತರಲ' ನಾದಗೆಯ್ದು
ಕಣ್ಣಿಗೊಂದು ರೂಪನೆಯ್ದು
ಮನವ ಘನದೊಳೆರಕ ಹೊಯ್ದು
ಎಂತೋ ಏನೋ ಇಳಿದು ಬಂತು.

೫

ದೇವನೊಲಿದು ಬರೆದ ಛಾಯೆ
ಅವನ ಉಸಿರನೆಳೆವ ಛಾಯೆ
ಅವನ ಚೆಲುವ ಕಲೆಯ ಮೆರೆಯೆ
ಭೂಮಿಗಿಂತು ಇಳಿದು ಬಂತು.

ಚೆಲುವ ನಾಡು ಒಲವಿನಲ್ಲಿ
ಬಣ್ಣವಿಟ್ಟ ತೊಟ್ಟಿಲಲ್ಲಿ
ಕಣ್ಣು ತೆರೆದ ಸೂತ್ರಗೊಂಬಿ
ಜೀವ ತುಂಬಿ ಜೀಕಿ ಬಂತು.

# ಸಹಜ ಪ್ರೇಮ ಯೋಗ

ಕಂದ ತಂದ ಆನಂದ
ಎಷ್ಟು ಸಹಜ ಸಹಜ !
ಹಿಗ್ಗಿಗೊಲಿದು ಹೊಳೆದ ಹೆಸರು
ಅಷ್ಟೆ ಸಹಜ ಸಹಜ.

೨

ಮನೆಯ ಅಂಗಳದಲಿ ಆಡಿ
ಅರಳುತಿಹುದು ಮೂರ್ತಿ
ಮನದ ರಂಗದಲ್ಲಿ ಮರಳಿ
ಬೆಳಗುತಿಹುದು ಜ್ಯೋತಿ,

೩

ಮೂಕ ಭಾವ ಮೆರೆಯುತಿಹುದು
ಮುಖದೊಳಿಣಿಕಿ ಇಣಿಕಿ
ನಡುವೆ ನಡುವೆ ನಗೆಯ ಕಿರಣ
ಬಹುದು ಮಿನುಗಿ ಮಿನುಗಿ.

೪

ಉಸುರಿನುಯ್ಯಾಲೆಯಲಿ ಅಸುವು
ನಲಿಯುತಿಹುದು ಜೀಕಿ
ಕಂಡ ಕಣ್ಣು ಕುಣಿಯುತಿಹುದು
ರೆಪ್ಪೆ–ತಾಳ ಹಾಕಿ,

೫

ಅಂಗದಲ್ಲಿ ಮುಟ್ಟಿದಲ್ಲೆ
ಚಿಮ್ಮುತಿಹುದು ಜೀವ
ಜೀವ ಜೀವ ಸ್ಪರ್ಶದಿಂದ
ಪೊಮ್ಮುತಿಹುದು ಭಾವ

ರೋಮರಂಧ್ರ ರಂಧ್ರದಿಂದ
ಸೂಸುತಿಹುದು ಗಂಧ
ತಣಿಯುತಿಹುದು ತಾಯ ಮನವು
ಆದರ ಕಂಪಿನಿಂದ

ನುಣ್ಗದಪಿನೊಳೆಸೆವ ಕೆಂಪು
ಎತ್ತಣಿಂದ ಬಂತು ?
ತಾಯ ಹೃದಯ ಕಮಲವೆ ತಾ–
ನರಳಿರುವುದೆ ಇಂತು ?

೮

ಮೊಗದ ಕಿರಣ ಕಣ್ಣ ಕಿರಣ
ಬೆರೆವ ಪರಿಯ ನೋಡು
ಕರುಳು ಕರುಳು ಕೂಡಿ ಆಡಿ
ಒಂದುವೆರೆದ ಜೋಡು.

ಕಂದ ತೋಡಿದಾನಂದ
ಎಂಥ ರಮ್ಯ ರಾಗ !
ನುಡಿಯ ಮೇರೆ ಮೀರಿನಿಂದ
ಸಹಜ–ಪ್ರೇಮ ಯೋಗ !

# ಯಾವ ಸೊಗಸು!



ನಿದ್ದೆಯಲ್ಲಿ ಯಾವ ಕನಸು
ಕನಸಿನಲ್ಲಿ ಯಾವ ನೆನಸು
ನೆನಸಿನಲ್ಲಿ ಯಾವ ಸೊಗಸು !
ಅರಳಿ ಬಂದಿದೆ ?
ಕಂದನೆಳೆಯ ಮೊಗವು ನಗೆಯೊಳಿಂತು ಮಿಂದಿದೆ.

೨

ಆದುದೆಲ್ಲಿ ಆದರ ಜನನ ?
ಮೂಡಿತೆಂತು ಮೊದಲ ಕಿರಣ ?
ಎದೆಯ ಮುಗಿಲ ತಿಳಿಯ ಜೊನ್ನ
ಕದಪಿಗಿಳಿಯಿತೆ ?
ಕರಣಕರಣಗಳನು ಸ್ಫುರಣಗೊಳಿಸಿ ಸುಳಿಯಿತೆ ?



೩

ಚಿಗುರು_ದುಟಿಗಳಲ್ಲಿ ಮೂಡಿ
ತುಂಬುಗಲ್ಲಗಳಲಿ ಆಡಿ
ಹಣೆಯ ತೀಡಿ ಕುರುಳಿಗೋಡಿ
ಇಂದ್ರ ಜಾಲವ
ನೇದಿ ನಗೆಯು ಸೇರ್ವುದೇನು ಎದೆಯ ನೀಲವ ?

# ಜೀವ ಜಗ

ಕಂದನಾಡುತಿರೆ ಕಣ್ಣಮುಂದೆ ಕ–
ಲ್ಪನೆಯ ಕಿರಣವೊಂದು
ಮನದ ಮಂದಿರದಿ ಸುಳಿದು ಸ್ವರ್ಣರೇ-
ಷೆಗಳನೆಳೆಯಿತಂದು.

ಚಿತ್ರಭಿತ್ತಿಯಲಿ ಚಿತ್ರವರಳುತಿರೆ
ಗಾಳಿ ಸುಳಿದುದಾಗ
ತೇಲಿ ಬಂದ ತೆರನಾಯ್ತು, ಗಾಳಿಯಲಿ
ಎರಡು ದನಿಯ ರಾಗ.

ಕೇಳಿದುದನು ನಾ ಕೇಳಿದಂತೆ ಹೇ–
ಳುವೆನು ಕೇಳಿ ನೀವು
ಜೀವವನ್ನು ಜಗ ಕರೆದ ಮಾತು ಕೆರ–
ಳಿಸದೆ ಕೌತುಕವನು ?

"ನನ್ನೊಳಿಂತು ಸೌಹಾರ್ದವಾಂತು ಕರೆ–
ವವನು ನೀನದಾರು ?"
"ಹೊಸತು ಬಂದ ಎಲೆ ಜೀವ, ನನಗೆ ಜಗ-
ವೆಂದು ಕರೆವರವರು."

"ಕಳುಹಿದಾತ ದೊರೆ, ಇಳಿದು ಬಂದೆ ನಾ
ತಿಳಿವುದೇನು ನನಗೆ ?"
"ನನ್ನೊಳಿಂಬುವಡೆ ನಿನ್ನ ನಂಬಿ ನಡೆ
ತಿಳಿವುದೆಲ್ಲ ನಿನಗೆ."

"ಜಗದ ಜೀವನವು ದುಂಗುಡದಾಗರವು
ಎಂದು ಕೇಳಿರುವೆನು"
"ಭಯುವ ತಳ್ಳು, ಅನುನಯುವ ಕೊಳ್ಳು, ಸರಿ
ದಾರಿ ತೋರಿಸುವೆನು.

"ಹೊಸತು ಬಂದವನೆ ವಸುಧೆ ನನ್ನ ಮನೆ
ಬಾರ ಹೊಸ್ತಿಲಲ್ಲಿ
ನಿನ್ನ ಸ್ವಾಗತಕೆ ಸಿದ್ಧವಾಗಿಹುದು
ಇಲ್ಲಿ ರಂಗವಲ್ಲಿ

"ಚೆಲುವೆ ಚೆಲ್ಲವರಿದಿಹುದು ಎಲ್ಲ ಕಡೆ
ಬೀರು ನಿನ್ನ ನೋಟ.
ಪೊನಲುಗೊಂಡ ಅನುರಾಗದಲ್ಲಿ ಬೆಳೆ–
ದಿಹುದು ಬಾಳ ತೋಟ.

"ಚಲಿಸುತಿಹವು ಚಳಿ ಬಿಸಿಲು ಮಳೆಯು ಕ್ರಮ.
ವರಿತು ಖುತುಗಳಿಲ್ಲಿ
ಜನದ ಬನದ ಜೀವನದ ಗೆರೆಯುಸೆಳೆ–
ಯುವವು ಚಿನ್ನದಲ್ಲಿ.

"ನಸುಕು ಹರಿಯೆ ಉಷೆ ಮೂಡಿ ಬಿಡಿಸುವಳು
ನಿನ್ನ ಕಣ್ಣೆನೆವೆಯು
ಮಂಗಳಾಂಗಿ ಮಂಗಳವ ಕೋರುವಳು
ಇಕ್ಕಿ ರಂಗವಲಿಯು.

## ೫೪ ನಕ್ಷತ್ರಗಾನ

"ಬಾಲನೇಸರನು ಜನಿಸಿ ಬೀಸುವನು
ಸುತ್ತ ಬಿಸಿಲು ಬಲೆಯ
ಜೀವರಾಶಿಯಲಿ ಶೀವಿ ಪುಟಿಸುವನು
ಪ್ರಾಣರಸವ ಸೆಲೆಯ.

"ಮುಗಿಲನೇರಿ ರವಿ ಆಚೆಗಿಳಿಯೆ ರಂ–
ಜಿಪುದು ಸಂಜೆ ಮುಗಿಲು
ನೀಲ ನಭದೊಳೆಸೆವಿಂದ್ರಜಾಲವದು
ಯಾವುದದಕೆ ಮಿಗಿಲು ?

"ಇರುಳು ಚಿಕ್ಕೆ ಚಂದ್ರಮರು ಚಲಿಸುವರು
ಗಗನ ಮಾರ್ಗದಲ್ಲಿ
ಮಣಿದು ನೋಡು ನೀ ಮನವು ಮುಳುಗುವುದು
ಧ್ಯಾನ ಲಹರಿಯಲ್ಲಿ.

"ಬೆಳೆವ ಚಂದಿರನು ಬೆಳಗಲಿಳಿಯುವುದು
ಧರೆಗೆ ಸುಧೆಯ ಸೋನೆ
ಅಮೃತಗಂಗೆಯಲಿ ಮಿಂದು ತೇಲುವುದು
ಮೃತ್ಯಲೋಕ ತಾನೆ.

"ನಿತ್ಯ ನಡೆವುದೀ ನೃತ್ಯ ವೈಭವವು
ನನ್ನ ಅಂಗಳದಲಿ
ತೆರೆದು ಇರಿಸು ನಿನ್ನೆದೆಯ ಕದವ, ಸಿರಿ
ತೂರಿ ತೂರಿ ಬರಲಿ.

"ಚೆಲುವ ಮೀರಿ ಒಲವಿಹುದು ಬಾಳಿನಲಿ
ಅದುವೆ ಜೀವಧರ್ಮ
ಒಲವ ಬಿತ್ತಿ ಒಲವನ್ನು ಬೆಳೆಯುವುದೆ
ಸತ್ಯಯುಗದ ಮರ್ಮ,

"ಪ್ರೀತಿಯೆಂಬ ನದಿ ಮನದ ಮಾನಸದಿ
ಹುಟ್ಟಿ ಹರಿವುದಿಳೆಗೆ
ಹೊನಲು ತಿಳಿಂತು ಕೊನರುವುದು ಸೌಂದರದ
ಬಳ್ಳಿ ಎರಡು ಬದಿಗೆ,

"ನಾಡ ಹಿರಿಮೆ, ಸಂಸ್ಕೃತಿಯ ಗರಿಮೆ. ದಯೆ.
ನ್ಯಾಯ, ನೀತಿ ನಲ್ಮೆ
ಶುದ್ಧ ಪ್ರೇಮ ರೇಖಿಸಿದ ರೇಷೆಗಳು
ಒಲವೆ ಬಾಳ ಉಳಿಮೆ.

"ಎನಿತು ಪರರಿಗಿತ್ತನಿತು ಹೆಚ್ಚುವುದು
ಪ್ರೇಮ ರಾಮತೀರ್ಥ
ಉಕ್ಕಿ ಹರಿಯಲ್ಕೆ ಬಾಳತೋಟದಲಿ
ಒಲವಿನೂಟೆ ಸತತ.

"ಒಳಿತು ಚೆಲುವು ಒಲವುಗಳ ಪಾಕವದು
ಸತ್ಯವೆಂಬ ತಿರುಳು
ಸತ್ಯವನ್ನೆ ಹಿಡಿ, ನಿತ್ಯದೊರೆಯುವುದು
ಬಿಸಿಲಿನಲ್ಲಿ ನೆರಳು.

"ಹಕ್ಕಿಹಾರಿ ಶುಭಗೀತ ಪಾಡಿ ಮನ
ಹದವ ಗೈವ ಮುನ್ನ
ಗಾಳಿ ಆಡಿ ನರ ನಾಳ ತೀಡಿ ಹುರಿ–
ಗೊಳಿಪುವಿಲ್ಲಿ ನಿನ್ನ.

"ಏರಿ ಹೋಗು ಹುಮ್ಮಸದ ತೇರ ಕಾ-
ಯಕವೆ ನಿತ್ಯನೇಮ
ದುಡಿಮೆ ಬಾಳ ನೆಲೆ, ಉಂಟೆ ಬೇರೆ ಕಲೆ ?
ಅದುವೆ ಪುಣ್ಯಧಾಮ.

"ಎಲರು ಬೀಸೆ ಕಮ್ಮಲರು ಈಜೆ ಬಿರಿ-
ಯುವುದು ಕಂಪ ಸೂಸಿ
ಅಂತೆ ನೀನು ಸಂತಸದೊಳೀಜು ಗೆ-
ಯ್ಮೆಯಲಿ ಮೈಯ ಚಾಚಿ.

"ಸಂದ ಕಾರ್ಯದಲಿ ಒಂದು ನೇಮ ಹಿಡಿ
ಶುದ್ಧವಿರಲಿ ಭಾವ
ಅನ್ಯರನ್ನು ತಿಳಿ ನಿನ್ನ ಹಾಗೆ, ತಿಳಿ–
ಯುಹುದಂ ತಾನೆ ಭಾವ.

"ಭಾವ ಶುದ್ಧವಿರೆ ಯಾವುದೇನು ?–ಸಮ
ನಲ್ತೆ ಸೋಲುಗೆಲುವು ?
ಕಾರ್ಯದಲ್ಲಿ ಮನ, ಮನದಿ ಸ್ವಚ್ಛತನ
ಇದುವೆ ಕೊನೆಯ ನಿಲವು.

"ದೂರ ದೂರ ಸೋಜಿಗದ ನೂರು ತೆರೆ
ತೆರೆವೆ ನಿನ್ನ ಎದುರು
ಸಾಸದಿಂದ ಸಾಹಸಕೆ ನುಗ್ಗು. ಅದೆ
ವೀರತನದ ಕುರುಹು.

"ನಿನ್ನ ಕೆಚ್ಚ ನೀ ನೆಚ್ಚಿ ಮುಂದೆ ನಡೆ
ನೈಜ ಮಾರ್ಗದಿಂದ
ಮೊಗ್ಗೆ ಬಿರಿದು ಪರಿಮಳವು ಹರಡುವುದು
ನನ್ನ ಗಾಳಿಯಿಂದ.

"ಒಪ್ಪು ತಪ್ಪುಗಳ ಕವಲು ದಾರಿಯಲಿ
ಇಣಕಬಹುದು ತೊಡಕು
ಒಳಗಿನುಲಿಯ ಸುಳಿಹಿನಲಿ ಸಾಗು ಬಂ–
ಗಾರವಹುದು ಬದುಕು.

"ನಿಲಲಿ ಬಂದುದನು ಕೊಂಡು ಸುಖಿಪ ಸಂ-
ತೃಪ್ತಿ ದೃಷ್ಟಿಯಲ್ಲಿ
ಆಗ ಕಾಂಬೆ ಪರಮಾತ್ಮ ಬಿಂಬವನು
ಸಕಲ ಸೃಷ್ಟಿಯಲ್ಲಿ".

ಅಲೆಯ ಹಿಂದೆ ಅಲೆ ಬಂದ ಇಂಪಿನುಲಿ
ತಡೆದು ನಿಂದುದೆಲ್ಲಿ ?
ಮುದುವುಗಟ್ಟಿತದು ಎದೆಗೆ ತಬ್ಬಿದೆಳೆ
ಮಗುವಿನಂಗದಲ್ಲಿ !

# ವೀಣೆ

ವೀಣೆ ನುಡಿಯುತಿಹುದು ವೀಣೆಗಾರನೆಲ್ಲಿ ಜಾಣೆ ?
ಕರುಳ ಮೇಲೆ ಬೆರಳ ಲೀಲೆ ನಡೆವುದೆಂತೊ ಕಾಣೆ
ಅವನ ಕಲೆಯು ಅವನ ನೆಲೆಯು ತಿಳಿಯಬಲ್ಲೆವೇನೆ ?

ಎಂತಂ ಮೀಂಟಲಂತು ರಾಗ ಹೊಮ್ಮಿ ಹೊನಲದಾಗಿ
'ಕಿಂ' ಕಿಮೆಂದು 'ತುಂ' ತುಮೆಂದು ನಿನದಗೈದು ಸಾಗಿ
ಯಾವನಾದ–ಸಾಗರವನು ಸೇರಲಿದೆ ಸುಯೋಗಿ !

ಒಂದು ಮಿಡಿತಕೊಂದು ನುಡಿತ; ಒಂದು ಜಾವ ಜಾರೆ
ಬೇರೆ ಭಾವ ತೂರಿ ಬಹುದು ಯಾವ ಮಾಯೆ ನೀರೆ ?
ಭಾವ ಭಾವಕೊಗೆವ ರಾಗರಸಧಿಗಿಹುದೆ ಮೇರೆ ?

ತಂತಿಯೆನಿತು ತಂತಿಯೊಳಗೆ ಮನೆಗಳೆನಿತು ?-ಹೇಳೆ
ಒಂದು ಚಣಕೆ ಒಂದು ನೂರು ಛಂದ ನಾದಲೀಲೆ !
ಸ್ಫುರಣಕೊಮ್ಮೆ ಜನನ ಮರಣ ! ತಾರಮಂದ್ರ ಮಾಲೆ,

ಕರುಳ ಬೆರಳ ಸೋಂಕು ತೇಂಕುವುಸುರಿಗಸುವ ಬೀರೆ
ಜೀವವಾಣಿ ತಾನತಾನಗೊಂಡು ಮೇರೆ ಮೀರೆ
ಏಕವಾಣಿಗಖಿಲ ಲೋಕ ಸಿಲುಕಿ ಪುಲಕವೇರೆ.

ನೆಲದ ಜಲದ ಗಗನದಖಿಲ ರೂಪವರ್ಣ-ಜಾಲಾ
ಅಂತರಂಗದಲ್ಲಿ ಚಲಿಸೆ ಸ್ವರತರಂಗ ಮೇಳಾ
ಆದಿ ಅಂತವಿಲ್ಲದಂತೆ ನೆಗೆವುದಿದೋ ಲೀಲಾ

ವೀಣೆ ನುಡಿದ ಶ್ರುತಿಗೆ ವಿಶ್ವ ತಳೆವುದೇನೆ ನ್ಯಾಸಾ ?
ವಿಶ್ವ ಮಿಡಿದ ಗತಿಗೆ ವೀಣೆ ಪಡೆವುದೇನೆ ಪ್ರಾಸಾ ?
ಯಾವ ತಾಳಮೇಳಕೊಲಿದುದೀ ಕಲಾ ವಿಲಾಸಾ ?

# ಸ್ವಾತಂತ್ರ್ಯಯೋಗಿ

ಊದಿದನು ಊದಿದನು
　　ಬಿಡುಗಡೆಯ ಕೊಂಬ
ನಾಡಿನಲಿ ಮಾಡಿದನು
　　ಅಚ್ಚರಿಯ ತುಂಬ

"ಇಲ್ಲಿಹನೆ ? ಅಲ್ಲಿಹನೆ ?
　　ಎಲ್ಲಿಹನು ?"—ಎಂಬ
ಸೊಲ್ಲು ಸುಳಿದಾಡಿದುದು
　　ತೋರದಿದೆ ಬಿಂಬ.

ಕಾಣಲಿಲ್ಲವ ಕಣ್ಗೆ
　　ಕೆಣಕಿದನು ಕೆಚ್ಚ
ದೂರ ಬಹುದೂರದಿಂ
　　ನೆಟ್ಟನವ ನೆಚ್ಚ

ಅವನ ಕೊಂಬಿನ ನಾದ
　　ಜಾಡ್ಯವನು ಕೊಚ್ಚಿ
ಚೇತನಕೆ ಚೇತನ
　　ತೋರಿದುದು ಬಿಚ್ಚಿ

## ೬೦ ನಕ್ಷತ್ರಗಾನ

ಏನು ಮಿಂಚಿನ ವೇಗ ?
ದನಿ ಹರಡಿಹಿಂತು.
ಎಂಥ ಅದ್ಭುತ ಕಾರ್ಯ
ಅದು ನಡೆದುದೆಂತು ?

ಎದೆ ಎದೆಗಳಿಂ ಹೊಮ್ಮಿ
ಹರಿಯಿತದು ಭಾವ
ದಾಸ್ಯದಿಂ ಬಿಡುಗಡೆಗೆ
ಚೀಕಿದುದು ಜೀವ !

ಶಕ್ತಿಯೊಡನವನಲ್ಲಿ
ಸ್ಪರ್ಧಿಸಿತು ಯುಕ್ತಿ
ಮೀರಿದುದು ಎಲ್ಲವನು
ನಲ್ನಾಡ ಭಕ್ತಿ

ಅವನ ತ್ಯಾಗವೆ ತ್ಯಾಗ
ನಲ್ನಾಡಿಗಾಗಿ
ಎಲ್ಲವನು ಅರ್ಪಿಸಿದ
ಸ್ವಾತಂತ್ರ್ಯ-ಯೋಗಿ.

ಪರಮ ಅದ್ಭುತರಮ್ಯ
ಅವನ ಸಾಹಸವು
ಬಿಡುಗಡೆಯ ದಾರಿಯಲಿ
ಹೊಳೆವ ತೈಜಸವು.

ಹೃದಯ–ಸಿಂಹಾಸನದಿ
ಮಂಡಿಸಿದ ವೀರ
ರಾಜ್ಯ ಸಾಮ್ರಾಜ್ಯಗಳ
ನಡುಗಿಸಿದ ಧೀರ

"ಎಲ್ಲಿಹನು ? ಎಲ್ಲಿಹನು ?"
ಪ್ರಶ್ನೆ ಮರಮರಳಿ
ಮಿಡಿಯುತಿದೆ, ನುಡಿಯುತಿದೆ
ನಾಡನಾಡಿಯಲಿ.

# ಕೊರಲಿನ ದನಿ ಎಲ್ಲಿ?

ಶ್ರೀಕಂಠನು ಎಂಬುವ ಹೆಸರನ್ವರ್ಥಕ ನಿನಗೆ !
ನಿನ್ನಾ ಕೊರಲಿನ ಸಂಗದಿ ಸಿರಿ ಬಂದಿತು ನುಡಿಗೆ.
ಸಿರಿ ನಿಂದಿದೆ ಕೊರಲೆಲ್ಲಿದೆ ? ಕೊರಲಿನ ದನಿಯೆಲ್ಲಿ ?
ದನಿಯಲಿ ನಯವನು ತೋಡಿದ ಮೃದು ಹೃದಯದೆಲ್ಲಿ ?
ತಿಳಿ ಬಗೆಯನು ಕನ್ನಡಿಸುವ ನಗೆ ಮುಳುಗಿದುದೆಂತು ?
ತಡೆಯಿಲ್ಲದೆ ಹೊರಹೊಮ್ಮುವ ನುಡಿ ಅಡಗಿದುದೆಂತು ?
ನಿನ್ನೊಲು ನಮ್ಮಾಂತರ್ಯವ ಮೀಂಟುವರಿನ್ನಾರು ?
ಸಕಲ ಸ್ವರ ಗುರಿಯೊಂದಕೆ ಮೇಳಿಸುವರದಾರು ?

ಆ ಎಡೆ ಈ ಎಡೆ ಎಲ್ಲೆಡೆ ತನಿವಾತನು ಸೂಸಿ
ನಾಡಿನ ನರನಾಳಗಳಲಿ ಚೇತನವನು ಹರಿಸಿ
ಕನ್ನಡ ತಾಯಿಯ ಅಡಿಯಲಿ ನಿನ್ನ ಸುವನೆ ತೇದು
ಕನ್ನಡರಂತಃಕರಣದಿ ಕನ್ನಡತನ ನೆಯ್ದು
ನೀ ಕಂಡಾ ಹೊಂಗನಸದು ನೆನಸಾಗುವ ಮುನ್ನ
ಕಣ್ಮರೆಯಾದುದು ಉಚಿತವೆ ಕರುನಾಡಿನ ಚಿನ್ನ ?

('The Stone' ಎಂಬ ಇಂಗ್ಲಿಷ್ ಕವನದ ಅನುವಾದ)

"ಕೊರೆಯುವಿರ ಕಲ್ಲಿನಲಿ
    ನನ್ನವನ ಹೆಸರ ?"
ಕೇಳಿದಳು ಅವಳಿನ್ನ
    ಬಿಟ್ಟು ನಿಟ್ಟುಸಿರ.

ಅವಳಿಗಾವನೊ ನಲ್ಲ
    ಅವನೆನ್ನ ಗೆಳೆಯು;
ಗಣಿಯಲ್ಲಿ ಕೆಲಸವನು
    ಗೈಯುತಿರೆ ಶಿಲೆಯು
ಹೋಳೊಂದು ಮೇಲಕ್ಕೆ
    ಸಿಡಿದವನ ತಲೆಯು
ಮೇಲೆರಗೆ ತಲೆಯೊಡೆದು
    ಹಾರಿದುದು ಹರಣ.

ಎರಡು ಜೀವಗಳೊಂದೆ
    ಜೀವವೆನೆ ಸಾಗಿ
ನಲಿದುದನು ಕಂಡ ನಾ
    ಮನದಿ ಮರುಮರುಗಿ

ಮೆಲುಮೆಲನೆ ಅವಳಿಗೀ
ಸಾವಿನೊಸಗೆಯನು
ಅರುಹಲೆಂದಿರೆ ನಾನು
ನನಗಿಂತ ಮೊದಲು
ಯಾವನೋ ಹುಚ್ಚನವ
ತೆರೆಬಾಯ ತೆರೆದು
ಒರೆದು ಹೋಗಿದ್ದನವ
ಸುದ್ದಿಯೆಲ್ಲವನು,
ಇರಿದು ಹೋಗಿದ್ದನವ
ಅವಳ ಹೃದಯವನು
ಹೋಗಿದ್ದನವ ಕೆಡಹಿ
ಬಾಳ ಕಳಸವನು

ಮನೆಯ ತಲೆಬಾಗಿಲಲಿ
ಕಲ್ಲು ಗೊಂಬೆಯೆನೆ
ಅವಳು ನಿಂದುದ ಕಂಡೆ
ರೆಪ್ಪೆಯಿಕ್ಕದಲೆ.

ಹೆಪ್ಪುಗಟ್ಟಿತ್ತುಸಿರು
ನಿಂದ ನಿಲವಿನಲಿ
ನಿಬ್ಬೆರಗು ನೆಲಸಿತ್ತು
ವೆಟ್ಟ ನೋಟದಲಿ.

ತಲ್ಲಣಿಸಿತೆನ್ನ ಎದೆ
ನರಳಲಿಲ್ಲವಳು
ಗೋಗರೆದಳವನ ತಾಯ್
ಅತ್ತುದಿಲ್ಲವಳು.
ನಿದ್ದೆ ಪೋದನು ನಲ್ಲ
ಅವಳು ನಿದ್ರಿಸಳು:
ಮೂವಗಲು ಮೂರಿರುಳು
ಅವಳಿಗೊಂದಿರುಳು!
ಪಗಲೇನು?—ಇರುಳೇನು?
ಕಣ್ಮುಚ್ಚಲಿಲ್ಲ;
ಶೂನ್ಯ ದೃಷ್ಟಿಯ ನೆಟ್ಟು
ಕಂಡಳವಳೆಲ್ಲ.

೭೭ ನಕ್ಷತ್ರಗಾನ

ನಾಲ್ಕನೆಯ ದಿನ ಮೂಡೆ
ನನ್ನ ಬಾಗಿಲಲಿ
ಅವಳು ನಿಂದುದ ಕಂಡೆ
ಚಿತ್ರದಂದದಲಿ.
ಆಗ ಕೇಳಿದೆನಳಲ
ಸೀಳಿಬಂದುಸಿರ
"ಕಡೆಯುೂವಿರ ಕಲ್ಲಿನಲಿ
ನನ್ನವನ ಹೆಸರ?"

ಮರುವಗಲು ನಾನೊಂದು
ಮಿದುಗಲ್ಲನಾಯ್ದು
ಕೈಗೆ ಚಾಣವ ಕೊಂಡು
ಅಂತಿಂತು ಹೋಯ್ದು
ಕಜ್ಜ ಕಣಿಯಾಗಿರಲು
ಮೆಲ್ಲನೊಳಸುಳಿದು
ಬಂದು ಕುಳಿತಳು ಅವಳು
ಕಲ್ಲ ಬಳಿಸಾರ್ದು.

ಕಲ್ಲಿನಲಿ ನಾನವಳ
ಪ್ರಿಯತಮನ ಹೆಸರ
ದಿನದಿನವು ಕಡೆಯುತಿರೆ
ಒಂದಿನಿತು ಉಸಿರ
ಸೂಸದೆಯೆ ಗೊಂಬೆಯೊನೆ
ಕುಳಿತು ನೋಡುವಳು
ಕಡೆದುದನು ಕಣ್ಕಿರಣ
ದಿಂದ ತೀಡುವಳು.
ತುಟಿ ತೆರೆಯಲಿಲ್ಲವಳು
ಪಿಟ್ಟೆನ್ನಲಿಲ್ಲ,
ಕಲ್ಲಿನಲಿ ಕೀಲಿಸಿದ
ಕಣ್ಣಲುಗಲಿಲ್ಲ.
ನೋಡುತಿರ್ದಳು ಅವಳು
ನೆಟ್ಟ ನೋಟದಲಿ
ದಿಟ್ಟಿಯಿಂದಾ ಶಿಲೆಯು
ಸೀಳುವಂದದಲಿ,
ಕಂಕರಿಸುತಿರೆ ಕಲ್ಲ
ನನ್ನ ಕೈಯುಳಿಯುಂ

ಆದರ ಮೊನೆಯನು ಮೀರಿ.
ಜವನ ಕೈಯುಳಿಯು
ಕೊರೆಯುತಿದ್ದಿತು ಅವಳ
ಅಂತರಾಳದಲಿ
ನುಡಿದುವಿಂತೆರಡು ಉಳಿ
ತಾಳಮೇಳದಲಿ.

ಕೊನೆಯು ಕಂಡಿತು ಕಾರ್ಯ
ಇಟ್ಟೆ ಸುತ್ತಿಗೆಯು;
ಶಾಂತಿ ಕೈಸಾರಿತೆನೆ
ಅವಳು ಚೆಂದುಟಿಯ
ತೆರೆದು ಮೆಲನುಸುರಿದಳು
ನಾ ಕೊರೆದ ಹೆಸರ
ಎದೆಯು ಒಲವನು ಸುರಿದ
ಪ್ರಿಯತಮನ ಹೆಸರ
ಹೊರಹೊರಡಿಸಿದಳಿಂತು
ಬಂಧಿಸಿದ ಉಸಿರ.

ತೆರೆದ ಬಾಗಿಲ ದಾಟಿ

ಎದೆಯ ಹೊರೆಯಿಳುಹಿ

ಹೋಗಿ ಬಿಟ್ಟಳು ಅವಳು

ಬರಲಿಲ್ಲ ಮರಳಿ.

ದಿನ ಉರುಳಿ ದಿನ ಬಂತು

ಎಂದಿನಂದದಲಿ

ಜವನ ಗೆಯ್ಮೆಯ ಸುದ್ದಿ

ಬಂತು ಜತೆಯಲ್ಲಿ.

ಅವಳ ನಲ್ಲನ ಹೆಸರ

ಕಡೆದ ರೀತಿಯಲಿ

ಅವಳ ಹೆಸರನು ಕೊರೆಯೆ

ಕಲ್ಲಿನೆದೆಯಲ್ಲಿ

ಬಂದಿತೆನಗಂದು ಕರೆ

ಸಿಡಿಲ ಮಾಳ್ಕೆಯಲಿ,

# ತಿರುಗದ ಬೀಸುವಕಲ್ಲಿಗೆ

ಬೀಸುವ ಕಲ್ಲೆ ನೀ ಪ್ರಾಸದ ಹಿನ್ನೆಲೆ
ಗರತಿಯು ಹಾಡಿನ ಒರತೆ ನೀನು !
ಯಂತ್ರದ ಯುಗದಲಿ ಅಂತರಂಗವ ಕೇಳ್ವ
ರಿಲ್ಲೆಂದು ನೀ ಸುಮ್ಮನಾದೆಯೇನು ?

ಮನೆಯಲಿ ನೀ ದನಿದೋರಲು ಗಂಧರ್ವ
ಗಾನವೆ ಇಳಿಗಿಳಿದಾಡುತಿತ್ತು
ಮಂಗಳೆಯರ ದನಿ ಮಾರ್ದನಿಗೊಡಲಾಗ
ಮಂಗಳ ಮನದಲಿ ಮೂಡುತಿತ್ತು.

ಬೆಳಗಿನ ಸುಳಿಗಾಳಿ ನಿನ್ನ ಹುಮ್ಮಸ ತಾಳಿ
ಜೀವಕೋಟಿಗೆ ಭಾವ ಬೀರುತಿತ್ತು
ಕೈಯ ಸೂಟಿಗೆ ಕಲ್ಲು ಗರಗರ ತಿರುಗಲು
ಬಾಳಿಗೆ ಹೊಸ ಕಳೆ ಏರುತಿತ್ತು.

ನಿನ್ನ ಸಂಗದಿ ಸುರಿದ ಸಂಗೀತ ರಸದಲಿ
ಜಗವೆಲ್ಲ ಹಗುರಾಗಿ ತೇಲುತಿತ್ತು
ರಸಿಕರ ಕಣ್ಣಿಂದೆ ಚಂದಿರ ಲೋಕವೆ
ತೆರೆದಂತೆ ಮೈ ನವಿರೇಳುತಿತ್ತು.

ಮುಕ್ಕು ಮುಕ್ಕಿನಕೂಡ ಜೊಕ್ಕು ಜೊಕ್ಕಿನ ತಾನ
ತೆಂಗಳ ಕೊರಳಿಂದ ಹೊಮ್ಮುತಿತ್ತು
ಸಕ್ಕರೆ ನಿದ್ದೆಯಿಂದೆಚ್ಚತ್ತ ಮಕ್ಕಳ
ಮನದಲಿ ಮಂದಾರವರಳುತಿತ್ತು.

ಇತ್ತೀಚೆ ನೀ ನಾಚಿ ಹೀಗೇಕೆ ತುಟಿ ಮುಚ್ಚಿ
ಮರೆಯಲ್ಲಿ ಒರಗಿಹೆ ಮರೆತು ಸುಖ ?
ಮೊದಲಿನಂದದಿ ಮತ್ತೆ ದನಿಯೆತ್ತಿ ಹಾಡೇಳು
ತೆರೆಯಲಿ ಹಿಂದಿನ ಇಂದ್ರಲೋಕ.

# ದಿವ್ಯ ಸ್ಪರ್ಶ

ಎಲ್ಲಿ ಇಹುದು ದಿವ್ಯ ಸ್ಪರ್ಶ
ಎಂದು ಹಿಗ್ಗ ಕರೆವುದು ?
ಜೀವದಲ್ಲಿ ಭಾವದಲ್ಲಿ
ರಂಗವಲ್ಲಿ ಬರೆವುದು ?
ನಂದನವನು ತೆರೆವುದು ?

ಮೂಡಲಲ್ಲಿ ಮುಗಿಲ ಸೋಂಕಿ
ರಾಗ ರಂಗ ಮೆರೆವೊಲು
ಇರುಳಿನೆದೆಯು ಸೋಂಕಿ ನಗೆಯು
ತಾರೆಗಳಲಿ ತೆರೆವೊಲು
ನಮ್ಮನೆಂದು ಮೊರೆವುದು ?

ಕೀಳು ಬಗೆಯು ಬಾಳ ಹೊಗೆಯು–
ನೆಂದು ದೂರಗೈವುದು ?
ಎದೆಯ ಒಲವ, ನಿಜದ ಛಲವ–
ನೆಂದು ಎತ್ತಿ ನಿಲಿಪುದು ?–
ಹಿತಕೆ ಹಿತವ ಸರಿಪುದು ?

ಸ್ಪರ್ಶದಿಂದ್ರಜಾಲದಿಂದ
ಸೃಷ್ಟಿ ಅರಳಿ ನಿಂದಿದೆ
ಬುವಿಯು ಬಾನು- ಯಾವುದೇನು
ಹೊಸತು ರಸದಿ ಮಿಂದಿದೆ
ಬಾಳನಣಕಿಪಂತಿದೆ,

ದಿವ್ಯ ಸ್ಪರ್ಶ ಪಡೆದು ಚಂದ್ರ
ಗೈವನಮೃತ ಲೀಲೆಯ,
ಅಂತೆ ಸೂರ್ಯನದನು ಪಡೆದು
ಸುರಿವ ಕಿರಣ ಮಾಲೆಯ ;
ಜೀವಕೆಂದು ಆ ನಯ ?

ಕಂಡು ಕಂಡು ಸುಮ್ಮನಿಹುದು
ಏನು ಚೆಂದ?– ಏಳುವಾ
ತನುವ ಮನವ ಹಸನಗೈದು
ಒಲುಮೆಗೊಲಿವ ಸ್ಪರ್ಶವ
ಇಂದೆ ಇದಿರುಗೊಳ್ಳುವ.

# ಮೇಘೋಪಾಸನೆ

ಕರುಣಾ ಜಲದಿಂದ ತುಂಬಿ
ತುಳುಕಿ ಬನ್ನಿರೇ.

ಬೆಂದು ಬಿರಿದು ಹೋದ ನೆಲ,
ನೊಂದು ಕೈಯ ಮುಗಿದ ಜನ
ಕರೆಯುತಿಹುದು : ಒಡಲ ಜಲ
ಸುರಿದು ಬನ್ನಿರೇ.

ಜನದಿ ಜನಕೆ ಇಹುದೆ ನಯ ?
ಎದ್ದು ಕುಣಿಯುತಿಹುದು ಭಯ ।
ಆಸೆಯೊಂದೆ ನಿಮ್ಮ ದಯ
ಅದನೆ ತನ್ನಿರೇ.

ತಂಪ ಸೊಂಪ ತಳೆಯಲಿಳೆ
ನೆಗೆಯೆ ಬತ್ತಿಹೋದ ಸೆಲೆ
ಹಾಡಿ ಹರಿಯೆ ಹಳ್ಳಕೊಳೆ
ಇಳಿದು ಬನ್ನಿರೇ,

ಹಸಿರು ಹಸಿರು ಹೊಮ್ಮ ಬೆಳೆ
ಸುಳಿಯೆ ಮೊಗದಿ ಮೊಗದಿ ಕಳೆ
ಮೂಡಿ ಮನದಿ ಮನದಿ ಕೆಳೆ
ತುಳುಕಿ ಬನ್ನಿರೇ.

# ಮೋಡಗಳ ಹಾಡು

ಕಡಲೀಗೆ ಸಾರೇವು
ನೀರನ್ನು ಹೀರೇವು
ಆಗಸಕೇರೇವು
ಏರೇವು
ಆಕಾರ ತೋರೇವು
ತೋರೇವು.

ಅಲ್ಲಲ್ಲಿ ಮೂಡೇವು
ಒಂದೆಡೆ ಕೂಡೇವು
ಚಕ್ಕಂದವಾಡೇವು
ಆಡೇವು
ಹಿಂದಾಗಿ ಮುಂದಾಗಿ
ಓಡೇವು.

ಒಂದು ಹತ್ತಾದೇವು
ಹತ್ತು ಒಂದಾದೇವು
ಬಹುರೂಪ ತಳೆದೇವು
ತಳೆದೇವು
ಬಯಲಿಗೆ ಬಣ್ಣವ
ಬರೆದೇವು.

## ೭೬ ನಕ್ಷತ್ರ ಗಾನ

ತಿಂಗಳ ಹೊನಲಲ್ಲಿ
ಹರಿಗೋಲ ಹೋಲೇವು
ತೇಲೇವು ತೇಲೇವು
ತೇಲೇವು
ಲೀಲೆಯಂ ಜಾಲವ
ನೇದೇವು.

ಒಮ್ಮೊಮ್ಮೆ ಹಗಲಲ್ಲಿ
ಬೆಳಕನ್ನೆ ಕುಡಿದೇವು
ಒಡಲಲ್ಲಿ ಕಡೆದೇವು
ಕಡೆದೇವು
ಕಾಮನ ಬಿಲ್ಲನ್ನು
ಪಡೆದೇವು.

ಸರಸಕೆ ಮುಚ್ಚೇವು
ಇರುಳ ಕಣ್ಮುಚ್ಚೇವು
ಆಗಾಗ ಬಿಚ್ಚೇವು
ಬಿಚ್ಚೇವು
ಚಿಕ್ಕೆಯ ದೀವಿಗೆ
ಹಚ್ಚೇವು.

ಕರುನಾಡ ಹೊಕ್ಕೇವು
ಸೊಬಗಿಗೆ ಸಿಕ್ಕೇವು
ಮಿಂಚನ್ನೆ ನಕ್ಕೇವು
ನಕ್ಕೇವು
ಗುಡುಗಿನ ಕೇಕೆಯು
ಹಾಕೇವು.

ಬಿಮ್ಮನೆ ಬೀಗೇವು
ಒಡಲನ್ನು ತೂಗೇವು
ಬಾಳನ್ನು ನೂಗೇವು
ನೂಗೇವು
ಮೆಲ್ಲನೆ ಮುಂದಕೆ
ಸಾಗೇವು.

ಹರಿದೇವು ಮೆರೆದೇವು
ಎಷ್ಟೊಂದು ಮೆರೆದೇವು
ಒಡಲನ್ನು ತೆರೆದೇವು
ತೆರೆದೇವು
ಭೂಮಿಗೆ ಮುತ್ತನ್ನೆ
ಸುರಿದೇವು.

ಮುತ್ತನ್ನು ಕಳಿಸೇವು
ಮುತ್ತನ್ನು ಬೆಳಿಸೇವು
ತೃಪ್ತಿಯು ಸುಳಿಸೇವು
ಸುಳಿಸೇವು.

ಬಾಳಿನ ಬಾವುಟ
ನಿಲಿಸೇವು

# ಬಂದ ಮಳೆ ನಿಂದಮೇಲೆ

ಮಳೆಯು ಬಂದು ನಿಂದಿರುವ
ಚೆಲುವ ನೋಡು ನೀರೆ !

ಬೆಂದ ಭೂಮಿಗಿಳಿದಿಹುದು
ಮುಗಿಲಿನೊಡಲ ತಂಪು
ಗಾಳಿಯಲ್ಲಿ ತೇಲಿಹುದು
ತೊಯ್ದ ನೆಲದ ಕಂಪು
ಹತ್ತು ದೆಸೆಗೆ ಹರಡಿಹುದು
ಏನೋ ಸೊಂಪು ಸೊಂಪು

ನೆಲವ ತಣಿಸಿ ನಿಂದ ಜಲ
ಹೊಳೆವುದೇನು ಚೆಂದ
ಜಲದಿ ಮಿಂದು ಮಿನುಗುವ ನೆಲ
ಹೊಸತು ಹೆಣ್ಣಿನಂದ !
ಮೇಲೆ ಎಸೆವ ಗಗನ ತಲ
ನಗುವುದೊಲವಿನಿಂದ.

ಬಿಸಿಲು ಬಲೆಯ ನೆಯ್ದಿಹುದು
ಬನದ ರಂಗದಲ್ಲಿ
ಹಸಿರು ಜಸವ ತೂಗಿಹುವು
ತೊನೆವ ತೊಂಗೆಯಲ್ಲಿ
ಹೊಸತು ಜೀವ ಜೀಕಿಹುದು
ಅಂಗ ಅಂಗದಲ್ಲಿ

ಮನವು ಹುಟ್ಟು ಹಾಕಿಹುದು
ಜಲತರಂಗದಲ್ಲಿ
ಸ್ವಪ್ನಸೀಮೆ ತೆರೆದಿಹುದು
ಸ್ವರ್ಣವರ್ಣದಲ್ಲಿ
ಹರ್ಷ ಹೆಜ್ಜೆ ಹಾಕಿಹುದು
ನೃತ್ಯಭಂಗಿಯಲ್ಲಿ

ಹಸನುಗೈದ ನೆಲಕೆ ಹದ
ಜಲದ ಬಲದಿ ಸಾರೆ
ಜನದ ಬನದ ಮನದ ಮುದ
ಮೇರೆಯನ್ನೆ ಮೀರೆ
ಮಣ್ಣಿನಿಂದ ಚಿನ್ನದೆಳೆ
ಬಾರದೇನೆ ನೀರೆ ?

ಪುಳಕಿಸಿಹುದು ಇಳೆಗೆ ಇಳೆ
ನಿನ್ನ ಹಾಗೆ ಬಾಲೆ
ಮೊಗದ ಮೊಗದ ನಗೆಯು ಕಳೆ
ಮಳೆಯು ಹೆಣೆದ ಮಾಲೆ
ಇದಕೆ ಸರಿಯೆ ಬೇರೆ ಕಲೆ !
ಇದುವೆ ಜೀವ ಲೀಲೆ.

# ರಂಗೋಲಿ

ನೀ ಹೊಯ್ಯ ಬಾ ನೀರೆ ರಂಗೋಲಿ,

ಜಗದ ಅಂಗಳದಲ್ಲಿ ಒಗೆಯು ರಂಗನು ಚೆಲ್ಲಿ
ನೀ ಹೊಯ್ಯ ಬಾ ನೀರೆ ರಂಗೋಲಿ
ನಿನ್ನಂತರಂಗದ ರೀತಿ ನೀತಿಯ ರಂಗು
ಕಂಗೊಳಿಸುವ್ಪೊಲಿಡು ರಂಗೋಲಿ.

ಪುಂಜಾಪದೊಡಲಿಂದ ಸಂಜೆಯು ಮಡಿಲಿಂದ
ತಿರಿ ತಂದು ಬರೆ ನಲ್ಲೆ ರಂಗೋಲಿ
ಇರುಳು ಚಂದ್ರನ ಬೇಡಿ ಹೊಳೆವ ತಾರೆಯ ನೋಡಿ
ತಿರೆಯ ತೀರದಿ ಚೆಲ್ಲೆ ರಂಗೋಲಿ,

ಬೆಳುದಿಂಗಳಿಳಿವಂತೆ ಬನಸಿರಿ ತೆರೆವಂತೆ
ಹೂ ನಗೆ ಹರಡಲಿ ರಂಗೋಲಿ
ಆನಂದದ ಛಂದದ ನಂದನ ತೋಟದ
ಸಿರಿಯನ್ನು ಪರಪಲಿ ಇದಿರಲ್ಲಿ

ಪ್ರೊಡವಿಯ ತಿರುಳನ್ನೆ ಬೆಡಗಿನ ಬೆರಳಲ್ಲಿ
ಹಿಡಿದು ನೀನಿಡು ನೀರೆ ರಂಗೋಲಿ
ಸುಗ್ಗಿಯ ಸಮಯದಿ ಹಿಗ್ಗಿನ ಬನದಲ್ಲಿ
ತೀಡಿದಂತಾಗಲಿ ತೆಂಗಾಳಿ

ನುಡಿಬಳ್ಳಿ ನಡೆಬಳ್ಳಿ ಒಂದೊಂದು ಹೂಬಳ್ಳಿ
ದಾಂಗುಡಿಗೊಳ್ಳಲಿ ರಂಗೋಲಿ
ಬಳ್ಳಿ ಬಳ್ಳಿಗೆ ಹಬ್ಬಿ ಹೂವು ಹೂವನು ತಬ್ಬಿ
ಒಲವಿನ ಬಲೆನೆಯ್ಯಲಿಳೆಯಲ್ಲಿ

ಕಣ್ಣೋಟ ಕೈಯೋಟ ಮನದ ಮಂಗಳ ಸೂತ್ರ-
ವನೆ ಚಿತ್ರಿಸುವೊಲಿಡು ರಂಗೋಲಿ
ಪರಿಶುದ್ಧ ಜೀವನ ಪ್ರತಿಬಿಂಬವಾಗಲಿ
ಮಂಗಳಾಂಗಿಯೆ ನಿನ್ನ ರಂಗೋಲಿ

ಜೀವದ ಸುಳುವಿರಲಿ ಭಾವದ ಹೊಳವಿರಲಿ
ಅನುಭಾವದುಯ್ಯಾಲೆ ತೂಗಿರಲಿ
ಸ್ಥೂಲದಿ ಸೂಕ್ಷ್ಮದಿ ಕಾರಣ ಲೋಕದಿ
ತೋರಣ ಗಟ್ಟಲಿ ರಂಗೋಲಿ.

ಮಾಜದೆ ಮರೆಸದೆ ನೈಜದಿ ಸಾಗುವ
ಸಾಜದ ಸಂಸಾರ ರಂಗೋಲಿ
ಜೀವನದುದ್ದಕು ಚಿನ್ನದ ಗೆರೆ ಎಳೆ
ಸಿಂಗಾರವಾಗಲಿ ರಂಗೋಲಿ

ಭಾರತ ಜನನಿಯು, ಅಂತೆ ಕನ್ನಡ ತಾಯು
ಅಡಿಯಲಿ ಸುಳಿಯಲಿ ರಂಗೋಲಿ
"ಇದು ನಮ್ಮ ನಾಡಿನ ಸಂಪದ ನೋಡೆಂದು"
ಬರೆದು ತೋರುವೊಲಿಡು ರಂಗೋಲಿ.

# ನೀಲ

ಮೇಲೆ ಮುಗಿಲಿನ ನೀಲ ಕೆಳಗೋ
ತಿಳಿಗೊಳದ ನೀಲವು
ನೀಲದಾವರಣದಲ್ಲಿ ತೇಲಿದೆ
ಜಡ ಜಗದ ಸಂಭಾರವು.

ಇಲ್ಲಿ ಕೆಳಗಡೆ ಕೆರೆಯ ನೀಲದಿ
ಮುಗಿಲ ನೀಲವೆ ಕರಗಿದೆ
ಹಿರಿದು ಕಿರಿದರೊಳೊಂದುವೆರೆದಿದೆ:
ಸಮಸಮಾಧಿಯೊಳೊರಗಿದೆ.

ಬಾನೊಳಲೆವುದೊ ಅಲೆಯುದಿಹುದೋ
ಎನುವೊಲಿಹ ಬಿಳಿ ಮೋಡವು
ಕೊಳದ ಹಂಸೆಯು ಹೋಲಿ ತೇಲಿದೆ
ಸುಳಿಯಲೋ ಬಿಡಲೆನುವೊಲು,

ಸರಸಿಯಲಿ ನಿಜ ನೀಲ ರೂಪವ
ಕಾಣಲೆಳಸಿತೊ ತಾನೆನೆ
ಮುಗಿಲು ಸಾಸಿರ ತಾರೆಗಂಗಳ
ಬಿಚ್ಚಿ ಬೀರಿದೆ ಬೆರಗನೆ.

## ೮೪ ನಕ್ಷತ್ರಗಾನ

ಮೌನ ನೀಲದಿ ಬೆರೆದಿರುವುದೋ
    ನೀಲ ಮೌನದಿ ನೆರೆದುದೋ !
ಏನೆ ಇರಲದು ; ಸಾಮರಸ್ಯಕೆ
    ಸಂಜೆ ಸಂದಿದೆ ಕಾಣದೋ,

ಬಯಲನಾಳುವ ನೀಲ ಮೌನವೆ
    ಬಗೆಗೊಳದಿ ಮಾರ್ಪೊಳೆದು ಬಾ
ಜೀವನದ ಜಂಜಡವ ಮಾಣಿಸಿ
    ಸಮರಸದೊಳದನೆರೆದು ಬಾ.

# ಕರೆವನೇ ಆವ!

ಮುಗಿಲೊಳಾವ ಅಡಗಿರುವನೆ
ಕರೆವನೇ ಆವ ?

ಇರುಳ ಸಮಯ ಸಾಧಿಸುವ
ಚಿಕ್ಕೆಗಣ್ಣ ಹಾರಿಸುವ
ಎಂತೋ ಏನೋ ತುಳುಕಿಸುವ
ಅಂತರಂಗವ !
ಕೆಳೆಯ ಬೆಳೆಸಿ ತವಕಗೊಳಿಸಿ ಸರಿವನೇ ಆವ.

ಚಂದ್ರ ಕಿರಣ ಕರೆವನವ
ಮಂದಹಾಸ ಮೆರೆವನವ
ನನ್ನ ಮನದ ಮಂದಿರವ
ತೆರೆವನೇ ಆವ
ತನ್ನ ಮಕುಟ ಮಣಿಯ ತೋರಿ ತೊರೆವನೇ ಆವ.

ಬೆಳಗಿನಲ್ಲಿ ಸುಳಿವನವ
ಜೈಗುಬಲೆಯೊಳಿಳಿವನವ
ರಂಗುದುಟಿಯ ಸಿಂಗರವ
ಮೆರೆವನೇ ಆವ
ಇಣಕಿ ಮಿಣುಕಿ ಬಗೆಯ ಕೆಣಕಿ ಸರಿವನೇ ಆವ.

## ೮೭. ನಕ್ಷತ್ರಗಾನ

ಮೇಘದಳ ಮೇಳಿಸುವ
ಇಂದ್ರಧನುವ ನೇರಿಸುವ
ಕೋಟಿ ಕೋಲುಗಳ ನೆಸೆದು
ಇರಿವನೇ ಅವ
ಮರಳ ಮರಳಿ ಹಳೆಯ ಗಾಯ ತೆರೆವನೇ ಅವ.

ಕಾಯ ಕಾಂತಿಯನು ಸುರಿವ
ಮನವ ಮೇಲಕೇರಿಸುವ
ನೀಲದಲ್ಲಿ ತೇಲಿಸುವ
ನನ್ನ ಚಿತ್ತವ
ರೂಪರಹಿತನಾದ ಚೆಲುವ ಕರೆವನೇ ಅವ.

ನೂರು ರೂಪ ರೂಪಿಸುವ
ರಾಗ ರಾಗ ರಂಗಿಸುವ
ಭಾವ ಭಾವ ದೀಪಿಸುವ
ಕರೆವನೇ ಅವ
ಮುಗಿಲಿಗೆನ್ನ ಮರುಳುಗೊಳಿಸಿ ಮರೆವನೇ ಅವ.

ಲಹರೆಗೆನ್ನ ಸಿಲುಕಿಸುವ
ತಾರೆಯಾಚೆ ಅಲೆಯಿಸುವ
ಯಾವ ದಡಕೆ ನಿಲುಕಿಸುವ
ಹರಿವ ಜೀವವ ?—
ನೀಲದಾಳಕಿಳಿದು ನೆಲೆಯ ಅರಿವನಾರವ ?

# ಚೆಲುವೆಗಲ್ಲ, ಚಲುವಿಗೆ

ಅಲ್ಲಿ ಇಲ್ಲಿ ನಾ ನೋಡಿದಲ್ಲಿ ನೀ
ಮೂಡಿ ಮೂಡಿ ಬಂದೆ
ಕಣ್ಣಿಗದು ಏನೊ ಏನೊ ತಂದೆ
ಮನಕೆ ನೀ ಮೋಡಿ ಮಾಡಿ ಬಂದೆ
ನಿನ್ನ ನೋಡಿ ತಂತಾನೆ ಮಿಡಿದಿತೀ ನನ್ನ ಜೀವನಾಡಿ
ನಿಲ್ಲು ನೀ ಹೀಂಗ ಹಿಗ್ಗ ತೋಡಿ.

ನೆಲವು ಜಲವು ಚಿತ್ತರದ ಬಾನು
ಅದೊ ! ನಿನ್ನ ಕರೆಯಲೆಂದು
ನಿನ್ನದೇ ರೂಪ ಬರೆಯಲೆಂದು
ನಿಂತಿಹವು ಅಂದು ಇಂದು ಎಂದು
ನಿನ್ನ ಸಂಗದಲಿ ರಂಗು ರಂಗು ರಂಗಾಯ್ತು ಸಕಲ ಸೃಷ್ಟಿ !
ರಂಗಿನಲಿ ಗುಂಗು ಆಯ್ತು ದೃಷ್ಟಿ,

ನಸುಕಿನಲ್ಲಿ ಹೊಸ ಬೆಳಕು ಹರಿಯೆ ತುಳು
ಕುವುದು ನಿನ್ನ ಬೆಳಕು
ನಡುವೆ ಚೆಂದುಟಿಯ ಕೆಂಪು ಝಳುಕು
ತುಂಬಿದಾನಂದ ರಸದ ತುಳುಕು
ರಾಗವಾಗಿ ತಾ ಸಾಗಿಬರಲು ಅನುರಾಗ ಬೆರೆವುದಲ್ಲೆ
ಬೆಳಕೆ ಹಾಡಾಗಿ ಹರಿವುದಲ್ಲೆ !

ಇರುಳು ಚಂದಿರನ ಕಿರಣ ಸರಣಿಯಲಿ
ಇಳಿದು ಇಳಿದು ಬರುವೆ
ಮನಕೆ ನೀ ಮದಿರೆಯನ್ನೆ ತರುವೆ !
ಚಣದಿ ಚಿತ್ತವನು ಸೂರೆಗೊಳುವೆ
ನಿನ್ನ ಮುಗುಳು ನಗೆ ಸೋಂಕೆ ಸಾಕು ಮಿಡಿಯುವುದು ಎದೆಯ ವೀಣೆ
ನಿನಗೆ ಸರಿ ಯಾರು?– ಹೇಳು ಜಾಣೆ.

ಚಪಲ ಚಿಗರೆಯಾ ಕಣ್ಣಿನಲ್ಲಿ ನಿನ
ಕಣ್ಣ ಕಂಡೆ ಕನ್ನೆ
ನಿನ್ನ ಚಾಪಲ್ಯ ಕಂಡೆ ಚೆನ್ನೆ
ನಿನಗೆ ಸೆರೆಯಾಯ್ತು ಜಗದ ಕಣ್ಣೆ !
ನಿನಗೆ ಒಲಿದ ಬಗೆ ಚಿಗರೆಯಾಗಿ ತೇಲಿತ್ತು ಮುಗಿಲಿನೆಡೆಗೆ
ಮಾಯವಾಗಿತ್ತು ಮಾಯೆಯೊಳಗೆ,

ದಿನದ ಮೇಲೆ ದಿನ ಉರುಳಿ ಹೋದರೂ
ನಿತ್ಯ ಹಾಸ ಸೂಸಿ
ನಿಲ್ಲುವುದು ನಿನ್ನ ರೂಪ ರಾಶಿ
ಕರೆದು ಯುಗಯುಗವ ಕೈಯ ಬೀಸಿ
ನಿತ್ಯ ನಿತ್ಯ ಹೊಸ ಮುಸುಕನೆತ್ತಿ ತೋರುವೆಯೆ ನಿನ್ನ ಮೊಗವ
ಜುಮ್ಮು ಜುಮ್ಮೆನಿಸಿ ಜಗಕೆ ಜಗವ

ಪುಣ್ಯಸದನೆ ಹುಣ್ಣಿಮೆಯ ಚಂದ್ರ ಕುಂ-
ಕುಮದ ತಿಲಕ ನಿನಗೆ !

ಭಾಗ್ಯದ ಲಕ್ಷ್ಮಿ ನೀನು ಮನೆಗೆ
ಮಂಗಳ ಗೌರಿ ಬಾರೆ ಮನಕೆ

ಬೆಳ್ಳಿ ಚಿಕ್ಕೆ ಮೂಗುತಿಯು ಹರಳು ಚಕಚಕನೆ ಹೊಳೆವುದಲ್ಲಿ
ನೀನೆ ಸಿಂಗರದ ಸೂತ್ರ ನಲ್ಲೆ !

# ಸೃಷ್ಟಿದೇವಿಯ ಪೂಜೆ

ಪೂಜಿಸುವಳು ಪೃಥಿವಿದೇವಿ ಹಗಲು ಇರುಳು ದೇವನ
ಹೊನಲುಗೂಡು ಹರಿವುದವಳ ಪರಮ ಪ್ರೇಮ ಭಾವನಾ
ನೋಡಿ ನಲಿಯೆ ಮೂಡಿ ಬಹನು ಮನದಿ ವಿಮಲ ಪ್ರೇರಣ

ಓಸರಿಸುವಳವಳು ಮೆಲನೆ ಮೆಲನೆ ಇರುಳ ತೆರೆಯನು
ತೆರೆವಳವಳು ತಿಳಿಯ ಬಗೆಯು ಮೆರೆವ ಮೊಗದ ಸಿರಿಯನು
ಹರಿಯಿಸುವಳು ಹಗಲು ಗಣ್ಣ ಬಿಚ್ಚಿ ಬೆಳಕು-ತೊರೆಯನು

ಮೀವಳವಳು ಸುತ್ತುವರಿದ ತಿಳಿಯ ನೀಲಗಡಲಲಿ
ಭಕ್ತಿರಸವ ತೆರೆ ತೆರೆ ತೆರೆ ತೀವಿಕೊಳುವಳೆದೆಯಲಿ
ಶುಚಿಯನಾಂತು ನಿಲುವಳಿಂತು ದೇವಿ ದೇವನಡಿಯಲಿ

ಕರುಳಲತೆಯ ಹೂವ ಬಿಡಿಸಿ ದೇವನಡಿಗೆ ಇಡುವಳು
ಉಸುರಿನಲ್ಲಿ ಕುಸುಮಗಂಧ ಸೂಸಿ ಧೂಪ ಕೊಡುವಳು
ತನ್ನ ಸೊತ್ತನೆಲ್ಲ ಪುರುಷಗಿತ್ತು ಹರುಷ ಪಡುವಳು

ಪ್ರಾರ್ಥಿಸುವಳು ಹಕ್ಕಿಗೊರಲ ಸರವ ತೀಡುತ
ಕೀರ್ತಿಸುವಳು ನೂರು ನೂರು ಸರದಿ ಗೀತ ಹಾಡುತ
ರಾಗದಲ್ಲಿ ರಾಗ ತೋಡಿ ಅವನೊಳೊಂದುಗೂಡುತ.

ಹಗಲು ಜಾರೆ ಪೂಜೆಯೋಜೆ ಕೀಲಿಸುವದು ಕಂಗಳ
ಹೊನ್ನಕಳಸ ರನ್ನದೀಪದೊಡನೆ ನಡೆವ ಮಂಗಳ
ಎಸೆಯಲದನೆ ಬಿಂಬಿಸುವುದು ಸಂಜೆ ಮುಗಿಲಿನಂಗಳ

ದೇವಿ ಪಡೆದ ಭಾವಲಹರಿ ಘನಿಸಿ ರಜನಿ ರೂಪವ
ತಳೆಯೆ ಧ್ಯಾನ ಭೇದಿಸುವುದು ನೀಲದಂತರಾಳವ
ಬೆಳಗಿ ನಿಲುವರಾಗ ಚಿಕ್ಕೆ ಚಂದ್ರರವಳ ಚಿತ್ತವ !

# ದಿವ್ಯ ಜ್ಯೋತಿ

ತಿಳಿ ನೀಲದಲ್ಲಿ ತಾ ನೀಲವಾಗಿ ಅವ ಹೋದ ದೂರ ದೂರ
ಬೆಳಗಿಹುದು ಇಲ್ಲಿ ಅವ ಬಿಟ್ಟ ಬೆಳಕು; ಇನ್ನೊಮ್ಮೆ ಏಕೆ ಬಾರ?

ಅಂದು ಸಂಜೆ ಪ್ರಾರ್ಥನೆಗೆ ದೇವಮಂದಿರದ ದಾರಿಯಲ್ಲಿ
ಆಚೆ ಈಚೆ ಮೊಮ್ಮಕ್ಕಳಿಬ್ಬರಲಿ ವ್ಯಯಭಾರ ಚೆಲ್ಲಿ
ಜಗದ ಕರುಣೆ ನಡೆವಂತೆ ನಡೆದು ಮಂದಿರದ ಪೀಠವೇರಿ
ನಿಂದನಿಲ್ಲೋ !— ಜಡವುಳಿದು ಜೀವವೊಂದಾಯ್ತು ದೇವನಲ್ಲಿ.

ಎಸೆದಗುಂಡಿಗಾ ಕುಸಿಸ ದೇಹದಲಿ ವಿಮಲ ರಕ್ತ ಚೆಲ್ಲಿ
ಮೀಯಿಸಿತ್ತು ಈ ಜಗದ ಮನವನೇ ಶೋಕ ಜಲಧಿಯಲ್ಲಿ
ಮುಗಿದ ಕೈಯು ಮುಗಿದಂತೆ ಇತ್ತು: ನೆಲಸಿತ್ತು ಕ್ಷಮೆಯು ಮೊಗದಿ
ಎದೆಯೊಳೆಂಥ ತಿಳಿಭಾವವಿತ್ತು! ಅದನಾವ ಬಲ್ಲ ಜಗದಿ?

ಹೋದ ಹೋದನವ ತ್ಯಾಗಜೀವನದ ತುತ್ತ ತುದಿಯನೇರಿ
ಏರಿ ಏರಿದೊಲು ಅಂತರಂಗದೈಸಿರಿಯ ಜಗಕೆ ತೂರಿ
ಸತ್ಯ ಪ್ರೇಮಗಳ ಸತ್ವವನ್ನೆ ಕಣ್ಣೆದುರು ಎತ್ತಿ ತೋರಿ
ಬೇರೆ ಲೋಕದನುಭಾವ ಬೀರಿ ಅವ ಹೋದನಾವ ದಾರಿ ?

ಎನಿತು ಸರಳ ನುಡಿ, ಎಷ್ಟು ಸಹಜ ನಡೆ, ಮನದ ಮಹತಿಯೇನು!
ಅವನ ಎದೆಯ ಉನ್ನತಿಯ ನಿಲುಕುವುದು ಯಾವ ಗಿರಿಯುಸಾನು?
ಇಹುದೆ ಅವನ ಕರುಣೆಯನು ಧರೆಗೆ ಕರೆವಂಥ ಕಾಮಧೇನು ?
ಅವನು ಗೈದ ಲೀಲೆಯಲಿ ಲಯಸಿತೆಂಥವರ "ನಾನು—ನಾನು".

ತಿಳಿದಿಹುದು ಚಿತ್ತ, ಹರಿದಿಹುದು ನೋಟ ಮೇಲಕ್ಕೆ ಬಾನಿನೆಡೆಗೆ
ಆ ಜಾಡ ಹಿಡಿದು ಇಳಿದಂತೆ ಇಹುದು ಬೆಳಕೊಂದು ಕೆಳಗೆ ಇಳೆಗೆ
"ಏನೆಷ್ಟು ಭ್ರಾಂತಿ? ಕಾಣದೆಯು ಜ್ಯೋತಿ?" ಎಂಬರುಹು ಮೂಡಲೊಡನೆ
ಬೆಳಕ ನಂಬಿ ನಿಂದಿಹನು ಧೀರ ಎದೆ ತೆರೆದು ನಾಡ ಕರೆಗೆ.

ಕನ್ನಡದಲ್ಲಿ ಲೇಖಕ – ಪ್ರಕಾಶಕ- ಮಾರಾಟಗಾರ – ಓದುಗರ ನಡುವೆ ಗಾಢ ಸಂಬಂಧವನ್ನು ಏರ್ಪಡಿಸಿ, ಓದುಗರಲ್ಲಿ ಉತ್ತಮ ವಾಚನಾಭಿರುಚಿಯನ್ನು ಬೆಳೆಸಿ, ಓದುಗರಿಗೆ ಒಳ್ಳೆಯ ಪುಸ್ತಕಗಳು ಸುಲಭ ಬೆಲೆಯಲ್ಲಿ ದೊರೆಯುವಂತೆ ಮಾಡುವುದು, ಕನ್ನಡ ಪುಸ್ತಕೋದ್ಯಮವನ್ನು ಜನಪರವಾಗಿ ಬೆಳೆಸುವುದು – ಇದು ಕನ್ನಡ ಪುಸ್ತಕ ಪ್ರಾಧಿಕಾರದ ಪ್ರಮುಖ ಧ್ಯೇಯೋದ್ದೇಶಗಳಲ್ಲಿ ಒಂದು. ಈಗಾಗಲೆ ಪ್ರಕಟವಾಗಿ ಮನ್ನಣೆಗಳಿಸಿ, ಈಗ ಲಭ್ಯವಿಲ್ಲದಿರುವ ಪುಸ್ತಕಗಳನ್ನು ' ಜನಪ್ರಿಯ ಪುಸ್ತಕ ಮಾಲೆ'ಯಲ್ಲಿ ಪ್ರಕಟಿಸಿ ಸುಲಭ ಬೆಲೆಗೆ ಪ್ರಾಧಿಕಾರವು ಓದುಗರ ಕೈಯಲ್ಲಿಡುತ್ತಿದೆ. ನಿನ್ನೆ- ಇಂದುಗಳ ನಡುವಣ ಒಂದು ಸೇತುವೆ 'ಜನಪ್ರಿಯ ಪುಸ್ತಕ ಮಾಲೆ'